# ಸುಂಕೇಮಲೆ ಭೈರವಾರಾಧನೆ : ಹೊಳಹು


ಸಂಶೋಧಕ

ಎ. ಸಿದ್ದಣ್ಣ

ಮಾರ್ಗದರ್ಶಕರು

ಡಾ. ಮಂಜುನಾಥ ಬೇವಿನಕಟ್ಟಿ

ಪ್ರವಾಚಕರು







೨೦೦೩ - ೨೦೦೪

ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

94

# ನುಂಕೇಮಲೆ ಭೈರವಾರಾಧನೆ : ಹೊಳಹು

(ಕನ್ನಡ ವಿಶ್ವ ವಿದ್ಯಾಲಯಕ್ಕೆ ಎಂ. ಫಿಲ್ ಪದವಿಗಾಗಿ ಸಾದರ ಪಡಿಸುತ್ತಿರುವ ಪ್ರಬಂಧ)

**ಸಂಶೋಧಕ**

ಎ.ಸಿದ್ದಣ್ಣ

**ಮಾರ್ಗದರ್ಶಕರು**

ಡಾ.ಮಂಜುನಾಥ ಬೇವಿನಕಟ್ಟಿ

ಪ್ರವಾಚಕರು



೨೦೦೩-೨೦೦೪

**ಜಾನಪದ ಅಧ್ಯಯನ ವಿಭಾಗ**

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬.

# " ಸ್ಮೃತಿಯ ಅಂಗಳ "

ನನ್ನ ಎಂ.ಫಿಲ್ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಹಿಂದಿನ ಕುಲಪತಿಗಳಾದ ಡಾ. ಹೆಚ್. ಜೆ. ಲಕ್ಕಪ್ಪ ಗೌಡರಿಗೆ ಹಾಗೂ ಇಂದಿನ ಕುಲಪತಿಗಳೂ, ಕುಲಸಚಿವರೂ ಆದ ಡಾ. ಕೆ.ವಿ. ನಾರಾಯಣ ಅವರಿಗೆ, ಅಧ್ಯಯನಾಂಗದ ನಿರ್ದೇಶರಾದ ಡಾ. ಕರೀಗೌಡ ಬೀಚನಹಳ್ಳಿ ರವರಿಗೂ ಮತ್ತು ವಿಭಾಗದ ಮುಖ್ಯಸ್ಥರಾದ ಡಾ. ಸ.ಚಿ. ರಮೇಶ್ ರವರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುವೆ.

ಅತ್ಯಂತ ಸ್ನೇಹಮಯವಾಗಿ ಅಧ್ಯಯನ ಕ್ರಮವನ್ನು ಬೋಧಿಸಿ ಪ್ರೀತಿಯ ಮಾತುಗಳಿಂದ ಅಷ್ಟೇ ಮೌಲ್ಯಯುತವಾಗಿ ಮಾರ್ಗದರ್ಶನ ನೀಡಿದ ನನ್ನ ಪ್ರೀತಿಯ ಗುರುಗಳಾದ ಡಾ. ಮಂಜುನಾಥ ಬೇವಿನಕಟ್ಟಿಯವರಿಗೆ ಮತ್ತು ಅಧ್ಯಾಪಕರುಗಳಾದ ಡಾ. ಮೊಗಳ್ಳಿ ಗಣೇಶ್, ಡಾ. ಹೆಬ್ಬಾಲೆ ಕೆ. ನಾಗೇಶ್, ಡಾ. ಹರಿಶ್ಚಂದ್ರ ದಿಗ್ಸಂಗೀಕರ್. ಡಾ. ಸಿ.ಟಿ. ಗುರುಪ್ರಸಾದ್ ರವರಿಗೆ ಹಾಗೆಯೇ ಡಾ. ವಿರುಪಾಕ್ಷಿ ಪೂಜಾರಹಳ್ಳಿ, ಡಾ. ಚೆಲುವರಾಜ ಸಾರ್‌ರವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಕ್ಷೇತ್ರಕಾರ್ಯದಿಂದ ಮೊದಲ್ಗೊಂಡು ಅದ್ಯಯನದ ಅವಧಿಯುದ್ದಕ್ಕೂ ಸಹಾಯ ಮಾಡಿದ ಮಿತ್ರ ಸಹೋದರ, ಯುವ ಕವಿ ಅರಣ್‌ಕುಮಾರ್ ಜೋಳದ ಕೂಡ್ಲಿಗಿ ಯವರಿಗೆ ನಾನು ತುಂಬಾ ಋಣಿಯಾಗಿರುವೆ. ಹಾಗೆಯೇ ನನ್ನನ್ನು ಪ್ರೋತ್ಸಾಹಿಸಿದ ಸಣ್ಣಪಾಪಯ್ಯ, ಸತೀಶ್ ಪಾಟೀಲ್. ಜಾಜಿ ದೇವೇಂದ್ರಪ್ಪ, ದೇವರಾಜ್ ಮತ್ತು ಮಿತ್ರರಾದ ಚಂದ್ರಪ್ಪ, ನಿಂಗಪ್ಪ ಬಿ. ಹೊಸಳ್ಳಿ, ಓಬಯ್ಯಹಾಗೂ ಷಮೀನಾಭಾನು. ತಾರಾಮತಿ, ಸಹಪಾಠಿಗಳಾದ ಗುರು, ಶ್ರೀನಿ, ಗಂಗಾಧರ ನಲ್ಲಾರೆಡ್ಡಿ, ಜಗದೀಶ್, ವೆಂಕಿ, ಶರಣ ಹಾಗೂ ನಮ್ಮ ವಿಭಾಗದವರೇ ಆದ ವೀರೇಶಪ್ಪ, ಜಾಫರ್, ಹಾಗೂ ಪ್ರಬಂಧದ ಸಿದ್ದತೆಯಲ್ಲಿ ಅಂದವಾಗಿ ಅಕ್ಷರಗಳ ಸಂಯೋಜನೆ ಮಾಡಿಕೊಟ್ಟ ಎಸ್. ಎಮ್. ಪಿ. ಕಂಪ್ಯೂಟರಿನ ರೇಷ್ಮಾ ರವರಿಗೆ ನನ್ನ ಕೃತಜ್ಞತೆಗಳು.

ಬಹುದೂರದಿಂದ ಮಕ್ಕಳ ಬದುಕನ್ನು ನಿರೀಕ್ಷಿಸುವ ಅಮ್ಮನವರಿಗೂ ನಾಲ್ಕು ಮಂದಿ ಮಕ್ಕಳಿಗೂ ನಾಲ್ಕಕ್ಷರ ಕಲಿಸಲು ಅನುವಾದ ಅಪ್ಪನವರಿಗೂ ಮತ್ತು ಚಿಕ್ಕಪ್ಪನವರಿಗೆ.

ತಾಯಿಯ ಪ್ರೀತಿಯನ್ನು ಧಾರೆಯೆರೆದ ಅಕ್ಕ ಮಲ್ಲಮ್ಮ ಟೀಚರ್‌ರವರಿಗೂ ಮಾಮ ಜಿ. ಬೋರಯ್ಯ ಮತ್ತು ಚೇತನ, ಪುಟಾಣಿ ಸಹನ ರವರಿಗೆ.

ದೇವರಂತಹ ಅಣ್ಣ ಪಾಲಣ್ಣನವರಿಗೆ, ಮಾತೃಶ್ರೀ ಅತ್ತಿಗೆ ಅನುಸೂಯಮ್ಮ, ತಮ್ಮಂದಿರಾದ ಗುರಣ್ಣ, ಬೋರಯ್ಯ(ಬೂದಿ) ಅಕ್ಕ ಜಯ್ಯಮ್ಮ, ತಂಗಿಯರಾದ ಸಣ್ಣ ಪಾಲಮ್ಮ, ಮಲ್ಲಮ್ಮ, ಮಾಮ ಡಿ, ಬೋರನಾಯಕ, ಬಾವಂದಿರಾದ ರಾಜ, ಜಗದೀಶ್, ಸದಾ ಅತ್ಯಂತ ಪ್ರೀತಿಯಿಂದ ಕಂಡ ಅಣ್ಣ ತಿಮ್ಮಣ್ಣ ನವರಿಗೂ ಮತ್ತು ನಾಗೇಂದ್ರಪ್ಪ, ಈಶಣ್ಣ ತಮ್ಮ ಪಾಲಾಕ್ಷಿ, ರವರಿಗೂ.

ಆಶಾ, ಗುರುಸ್ವಾಮಿ, ಸವಿತ , ಲಕ್ಷ್ಮಿ ಗುರುಪ್ರಸಾದ್, ಶಾಂತ, ಸೌಗಂಧಿ, ಐಶ್ವರ್ಯ, ಪವಿತ್ರ, ಕಲ್ಪನ, ನಾಗೇಂದ್ರಮ್ಮ, ಜ್ಯೋತಿ - ಯವರಿಗೂ.

ನನ್ನ ವಿದ್ಯಾರ್ಥಿ ಜೀವನದುದ್ದಕ್ಕೂ ಅನೇಕ ಸಲಹೆ ಸೂಚನೆಗಳನ್ನು ನೀಡುತ್ತಾ ಬಂದ ಪಿತೃಶ್ರೀ, ಬಂಧು, ದಳವಾಯಿ, ಬೋರಣ್ಣನವರಿಗೂ ಅದೇ ರೀತಿ ತಿಪ್ಪೇಶಣ್ಣಾ ನವರಿಗೆ ಮತ್ತು ಅತ್ಯಂತ ಸೂಕ್ಷ್ಮವಾಗಿ ಪೋಟೋಗಳನ್ನು ಸೆರೆಹಿಡಿದುಕೊಟ್ಟು ಸಹಾಯಮಾಡಿದ ಶಶಾಂಕ, ಪೋಟೋಗ್ರಾಫರ್ ತಿಪ್ಪೇಶಣ್ಣನವರಿಗೆ

ಅಕ್ಕರುದ್ರಮ್ಮ, ಮಾಮ ಬೈಯ್ಯನಾಯಕ ಹಾಗೂ ಗುರುಮೂರ್ತಿ ಬೋರಪ್ಪ, ರಾಧಾಲಕ್ಷ್ಮಿ, ನಾಗವೇಣಿಯವರಿಗೆ.

ಹಲವಾರು ರೀತಿಯಿಂದ ಸಹಾಯ ಮಾಡಿದ ಮಾಮ ಬಿ. ತಿಪ್ಪೇಸ್ವಾಮಿಯವರಿಗೆ ಅಕ್ಕ ಸಿದ್ದಕ್ಕ, ಮತ್ತು ಗಾಯತ್ರಿ, ಶಾಂತ ರವರಿಗೆ.

ಮಿತ್ರವರ್ಗದವರಾದ ಪಿ.ಬೋರಣ್ಣ, ಜಿ. ಬೈಯ್ಯಣ್ಣ, ರಾಮಚಂದ್ರ, ಬಿ.ಪಿ. ಮಲ್ಲಿ, ಡಿ.ಜಿ. ಪಾಲಯ್ಯ, ಬಿ.ಟಿ. ಬೋರಯ್ಯ, ಗುಂಡುಬೋರಯ್ಯ, ಜಿ. ಪಿ. ನಾಗೇಂದ್ರಪ್ಪ, ಪಿ. ನಾಗರಾಜ, ಜಿ. ಉಮೇಶ್ ರೇವಣ್ಣ, ಜಿ. ಪಾಲಯ್ಯ ಎಂ. ಎಲ್. ಎ. ಪಾಲಯ್ಯನವರಿಗೆ.

ಮಾಮಂದಿರಾದ ಗೌ॥ ಸೂರಯ್ಯ, ಗೌ॥ ಪಾಲಯ್ಯ , ಗೌ॥ ಓಬಯ್ಯ ಹಾಗೂ ಮಾಮ ಕೆ. ಬಿ. ಕೃಷ್ಣಪ್ಪ, ಅಣ್ಣ ಎಂ. ಸಿದ್ದಪ್ಪ, ಜಿ. ಓಬನಾಯಕ ನವರಿಗೆ ನನ್ನ ಕೃತಜ್ಞನತೆಗಳು ಸಲ್ಲುತ್ತವೆ.

ಅಧ್ಯಯನ ಅವಧಿಯಲ್ಲಿ ಅಗತ್ಯವಾದ ಪುಸ್ತಕಗಳನ್ನು ಒದಗಿಸಿಕೊಟ್ಟ ರಾಧಕೃಷ್ಣನ್, ಸೋಮು ಹಾಗೂ ಇತರೆ ಗ್ರಂಥಾಲಯದ ಸಿಬ್ಬಂದಿ ವರ್ಗಕ್ಕೂ.

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಹಾಯ ಮಾಡಿದ ಮಲ್ಲಣ್ಣ ಮತ್ತು ಪೂಜಾರಿ ಗುಡ್ಡದ ಸಿದ್ದಣ್ಣ ನಂತರ ನಾಥಪಂಥದವರಿಂದ ಆಯ್ಕೆಗೊಂಡ ಈ ಕ್ಷೇತ್ರದ ಸ್ವಾಮಿ,ಮಂಗಲ ನಾಥಾಜಿಯವರಿಗೆ ಹಾಗೂ ಇತರೆ ವಕ್ತೃಗಳಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

## ಸಂಶೋಧಕನ ಪ್ರಮಾಣ ಪತ್ರ

**'ನುಂಕೇಮಲೆ ಭೈರವಾರಾಧನೆ : ಹೊಳಹು'** ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ. ಫಿಲ್ ಆಂಶಿಕ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೆ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ: ೧೫.೦೪.೨೦೦೪**

**ಸ್ಥಳ : ವಿದ್ಯಾರಣ್ಯ**

ಸಿದ್ದಣ್ಣ ಎ.

**ಸಿದ್ದಣ್ಣ ಎ.**
**ಸಂಶೋಧಕ**
**ಜಾನಪದ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ ಹಂಪಿ**
**ವಿದ್ಯಾರಣ್ಯ**

## ಮಾರ್ಗದರ್ಶಕರ ದೃಢೀಕರಣ ಪ್ರಮಾಣ ಪತ್ರ

ಶ್ರೀ ಎ. ಸಿದ್ದಣ್ಣ ಅವರು ''**ನುಂಕೇಮಲೆಭೈರವಾರಾಧನೆ : ಹೊಳಹು**'' ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧದ ವಿಷಯವನ್ನು ಇದುವರೆಗೂ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ,
ದಿನಾಂಕ : ೧೫.೦೪.೨೦೦೪

ಡಾ. ಮಂಜುನಾಥ ಬೇವಿನ ಕಟ್ಟಿ,
ಪ್ರವಾಚಕರು
ಜಾನಪದ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ - ೫೮೩ ೨೭೬.

# ಪರಿವಿಡಿ

# ನುಂಕೆಮಲೆ ಬೈರವಾರಾಧನೆಯ ಕ್ಷೇತ್ರದ ನಕ್ಷೆ



# ನಕ್ಷೆಯ ವಿವರ

1. ಪಶ್ಚಿಮದಿಂದ ಪ್ರವೇಶಿಸಿದರೆ ಸಿಗುವ ಹರಳಯ್ಯನ ದೇವಸ್ಥಾನ (ಕೆಳಗಿನ ಈರುಲ್ಲ)
2. ಹರಳಯ್ಯನ ದೇವಸ್ಥಾನದ ಬಳಿ ಇರುವ ಚಿಕ್ಕ ಹೊಂಡ
3. ಕರ್ಪೂರದಮ್ಮನ ಕಿಂಡಿ.
4. ಮಲ್ಲಿಕಾರ್ಜುನ ದೇವಸ್ಥಾನ.
5. ಶಾಸನವಿರುವ ಬಂಡೆಗಲ್ಲು.
6. ದೊಡ್ಡ ಹೊಂಡ.
7. ಕಲ್ಯಾಣ ಮಂಟಪ.
8. ನುಂಕೇಮಲೆ ಭೈರವನ ದೇವಸ್ಥಾನ.
9. ಜೋಗಿ ಅಥವಾ ಗೋರಕ್ಷಕನಾಥ ದೇವಸ್ಥಾನ.
10. ನಾಥಪಂಥದ ಪರದೇಶಿಯ ನಿವಾಸ.
11. ಸಿಡಿ ಮೈದಾನ.
12. ಗೋಸಾಲೆ.
13. ಹನುಮಂತ ದೇವರ ದೇವಸ್ಥಾನ.
14. ಕರ್ಪೂರದಮ್ಮನ ದೇವಸ್ಥಾನ.
15. ಪೂರ್ವದಿಂದ ಪ್ರವೇಶಿಸಿದರೆ ಸಿಗುವ ಹರಳಯ್ಯನ ದೇವಸ್ಥಾನ. (ಮೇಗಳ ಈರುಲ್ಲ)
16. ಮೊಳಕಾಲ್ಮೂರಿನಿಂದ ಉತ್ತರಕ್ಕೆ ಬಂದರೆ ಸಿಗುವ ಕೋಟೆಯ ದ್ವಾರ ಬಾಗಿಲು
17. ಸಿಡಿ ಆಡಿದ ನಂತರ ದೀಪ ಹಚ್ಚುವ ದೀಪ ಸ್ತಂಭ.
18. ಮೊಳಕಾಲ್ಮೂರು ನಗರದ ಬಸ್ ನಿಲ್ದಾಣ.
19. ಸಮುದಾಯ ಭವನ.
20. ಜೋಗಿ ಗುಡ್ಡ.
21. ಕುದುರೆ ಹೆಜ್ಜೆ.

# ೧. ಹೊಳಹುನ ಉದ್ದೇಶ ಮತ್ತು ವ್ಯಾಪ್ತಿ

ಮಾನವನ ಇತಿಹಾಸವನ್ನೊಮ್ಮೆ ಅವಲೋಕಿಸಿದರೆ ಅವನ ಏಳು ಬೀಳಿನ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕಾಣಬಹುದು ಮನುಷ್ಯನೇ ದೈವ ಸ್ವರೂಪವಾಗಿ ದೈವವೇ ಮನುಷ್ಯರೂಪವಾದ ಪರಿವರ್ತನೆಯಿಂದ ಪರಂಪರೆಯುದ್ದಕ್ಕೂ ಕೊಡುಕೊಳ್ಳುವಿಕೆಗಳನ್ನು ಗುರಿತಿಸಬಹುದು. ಇಂತಹ ಸಾಧ್ಯತೆಗಳಿಂದಾಗಿಯೇ ಜನಪದರ ಸ್ಮೃತಿ ಪಟಲಗಳಲ್ಲಿ ಸಾಂಸ್ಕೃತಿಕ ನಾಯಕರನ್ನು ಕಾಣಬಹುದಾಗಿದೆ. ಸಾಂಸ್ಕೃತಿಕ ಸಂಘರ್ಷದ ಚಿತ್ರವನ್ನು ನೋಡಬಹುದಾಗಿದೆ. ಯಾವುದೋ ಒಂದು ಕಾಲಘಟ್ಟದಲ್ಲಿ ಜನರನ್ನು ಹಿಂಸಿಸುತ್ತಿರುವ ರಾಕ್ಷಸರನ್ನು ಸಂಹಾರ ಮಾಡಿಯೋ, ದೈತ್ಯ ಪ್ರಾಣಿಗಳನ್ನು ಕೊಲ್ಲುವ ಮೂಲಕ ಜನರ ಹಿತವನ್ನು ಕಾಪಾಡಿಯೋ, ಆ ಜನರ ಪಾಲಿಗೆ ಭೂಮಿಯ ಮೇಲಿನ ಸಾಕ್ಷಾತ್ ದೈವನಾಗಿ ಬಿಡುತ್ತಾನೆ. ಅವನು ಮಾನವನಾಗಿದ್ದರೂ ಅತಿಮಾನುಪನಾಗಿ ಆ ಕ್ಷಣಕ್ಕೆ ಗೋಚರಿಸುತ್ತಾನೆ. ಆ ಅತಿಮಾನುಪತೆಯೇ ಜನರಲ್ಲಿ ಭಯ ಭಕ್ತಿ ಸಮರ್ಪಣಾ ಭಾವವನ್ನು ಒಡಮೂಡಿಸುವ ಜೊತೆಗೆ ಅವರ ಮನದೊಳಗೆ ಮೆಲುಕು ಹಾಕುವ ಆಹಾರವಾಗಿ ಕಾವ್ಯ, ಕಥೆ, ಐತಿಹ್ಯ, ಪುರಾಣವಾಗಿ ಅವುಗಳ ನಾಯಕನಾಗುತ್ತಾನೆ. ಇಂತಹ ಸಾಂಸ್ಕೃತಿಕ ನಾಯಕರು ನಮ್ಮ ಜನಪದರ ನೆನಪಿನ ತಿಜೂರಿಯಲ್ಲಿ ಅಚ್ಚಳಿಯದೆ ಉಳಿದಿದ್ದಾರೆ. ಅಂತಹ ನಾಯಕರ ಬಗೆಗೆ ಅಧ್ಯಯನ ಮಾಡುವುದು ಇಂದು ಎಂದಿಗಿಂತಲೂ ಅತ್ಯಾವಶ್ಯಕವಾಗಿದೆ.

ಜನಪದರ ನಾಯಕರನ್ನು ಅಧ್ಯಯನ ಮಾಡುವ ಮೂಲಕ ಅವರಿಗಿರುವ ಸಾಂಸ್ಕೃತಿಕ ಒತ್ತಡಗಳನ್ನು, ಇಂದು ಸಾಂಸ್ಕೃತಿಕ ನಾಯಕನಾಗಿ ನಿಂತು ಸಮಾಜಕ್ಕೆ ನೀಡಬಹುದಾದ ಸಂದೇಶವನ್ನೂ, ಮುಖವಾಡ ಹೊತ್ತು ನಿಂತಿರುವ ಇಂದಿನ ರಾಜಕೀಯ ನಾಯಕರುಗಳಿಗೆ ಡೋಂಗಿ ನಾಯಕತ್ವದ ವ್ಯಂಗವನ್ನು ಒಟ್ಟೊಟ್ಟಿಗೆ ತೋರಿಸುವ ಅನಿವಾರ್ಯತೆಯೂ ಇದೆ. ಹೀಗಾಗಿ ಜನಪದ ಸಾಂಸ್ಕೃತಿಕ ನಾಯಕರನ್ನು ವರ್ತಮಾನದೊಂದಿಗೆ ಮುಖಾಮುಖಿಯಾಗಿಸುವ ಮೂಲಕ ಭೂತದ ಪ್ರಸ್ತುತತೆಯನ್ನು ಅರಿಯಬೇಕಾಗಿದೆ. ಅಂತಹ ಅರಿವು ಈ ಅಧ್ಯಯನದ ಜೀವಾಳವಾಗಿದೆ ಎಂದು ಹೇಳಲು ಹೆಮ್ಮೆಯೆನಿಸುತ್ತದೆ. ಭೂತಕ್ಕೆ ವರ್ತಮಾನವನ್ನು ತಿದ್ದಿ, ತೀಡಿ, ಮಾರ್ಗದರ್ಶನ ಮಾಡಿ ಸಮಾವನ್ನು ಸನ್ಮಾರ್ಗದಲ್ಲಿ ನಡೆಸುವ ಶಕ್ತಿಯಿದೆ. ಇಂತಹ ಒಂದು ಶಕ್ತಿಜೀವ ತಳೆಯಬೇಕಾದರೆ ಭೂತವನ್ನು ಅಧ್ಯಯನಕ್ಕೊಳಪಡಿಸುವ ಮೂಲಕ ನೈಜ ಚಿತ್ರಣವನ್ನು ಜನರೆದುರಿಗೆ ತೆರೆದಿಡಬಹುದಾಗಿದೆ. ಅಂತಹ ತೆರೆದಿಡುವ ಪ್ರಯತ್ನ ಈ ಅಧ್ಯಯನದ ಉದ್ದೇಶವಾಗಿದೆ.

ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ಪರಿಸರದಲ್ಲಿ ಜನರ ಬಾಯಲ್ಲಿ, ಮನದಲ್ಲಿ ನಿತ್ಯ ಜಪವಾಗಿರುವ 'ನುಂಕೇಮಲೆ ಸಿದ್ದೇಶ್ವರ'ನೂ ಅಂತಹ ಒಬ್ಬ ಶಕ್ತಿಶಾಲಿ ಸಾಂಸ್ಕೃತಿಕ ನಾಯಕ. ಅಂತಹ ನಾಯಕ ಜನ ಮನದಲ್ಲಿ ದಾಖಲಾದದ್ದನ್ನು ಹೊರತು ಪಡಿಸಿದರೆ ಲಿಖಿತವಾಗಿ ದಾಖಲಾದದ್ದು ವಿರಳ, ಇನ್ನು ಅಧ್ಯಯನಕ್ಕೊಳಗಾಗಿದ್ದಂತೂ ದೂರವೇ ಉಳಿಯಿತು. ಹಾಗಾಗಿ ನುಂಕಪ್ಪನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಮತ್ತು ಇವತ್ತಿನ ದಿನದಲ್ಲಿಯೂ ಹೆಚ್ಚು ಪ್ರಸ್ತುತವಾಗುವ ಹಿಂದಿರುವ ಸತ್ಯಾಸತ್ಯತೆಯನ್ನು ವಿಶ್ಲೇಷಿಸುವುದು ಹೊಳಹುವಿನ ಮುಖ್ಯ ಉದ್ದೇಶವಾಗಿದೆ. ಹಾಗೆಯೇ ನುಂಕಪ್ಪನನ್ನು ವಾಸ್ತವದೊಂದಿಗೆ ಮುಖಾಮುಖಿಯಾಗಿಸಿ ಸಾಂಸ್ಕೃತಿಕ ಚರಿತ್ರೆಯನ್ನು ಮುರಿದು ಕಟ್ಟುವ ಬಹುಮುಖ್ಯ ಆಶಯವನ್ನು ಈ ಹೊಳಹು ಗರ್ಭೀಕರಿಸಿಕೊಂಡಿದೆ.

ಒಂದು ಅಧ್ಯಯನ ಸಾಂಸ್ಕೃತಿಕ, ಸಾಮಾಜಿಕ ಅಧ್ಯಯನ ಎನ್ನುವ ಸಾಂಪ್ರದಾಯಿಕ ಚೌಕಟ್ಟನ್ನು ಮೀರಿ ನಾನಿಲ್ಲಿ ''ನುಂಕೇ ಮಲೆ ಭೈರವಾರಾಧನೆ ಹೊಳಹು'' ಎಂಬ ಶೀರ್ಷಿಕೆಯನ್ನು ಕೊಟ್ಟಿದ್ದೇನೆ. 'ಹೊಳಹು' ಎಂದರೆ ಅಂತರ್ಯ, ಆಳ, ಮಿಂಚು, ಒಳನೋಟ, ಹೊಸ ಅಭಿವ್ಯಕ್ತಿ ಎಂದು ಅರ್ಥೈಸುವುದಾದರೆ, ನುಂಕೇಮಲೆ ಭೈರವಾರಾಧನೆಯ ಅಂತರ್ಯದ ಸತ್ಯಾಸತ್ಯತೆ ಮತ್ತು ಸೂಕ್ಷ್ಮವಾದ ಒಳನೋಟಗಳನ್ನು ಕೊಡುವ ಜಾಯಮಾನಕ್ಕೆ ಮೇಲಿನ ಶೀರ್ಷಿಕೆ ಬದ್ಧವಾಗಿದೆ ಎಂದು ಹೇಳಬಯಸುತ್ತೇನೆ. ಈ ಹೊಳಪು ಭೈರವಾರಾಧನೆಯ ಸೂಕ್ಷ್ಮ ಒಳನೋಟಗಳ ಒಟ್ಟು ಮೊತ್ತ ಎಂದು ಒಂದೇ ಸಾಲಿನಲ್ಲಿ ಹೇಳುವುದು ಹೆಚ್ಚು ಸೂಕ್ತ ಎಂದು ನನ್ನ ಅನಿಸಿಕೆ.

ಭೈರವಾರಾಧನೆ ಕೇವಲ ಕರ್ನಾಟಕದಲ್ಲಿ ಮಾತ್ರ ಕಂಡು ಬರುವುದಿಲ್ಲ. ಮಹಾರಾಷ್ಟ್ರ, ಆಂಧ್ರ, ತಮಿಳು ನಾಡುಗಳಲ್ಲಿಯೂ, ಬಹುತೇಕ ಭಾರತದಾದ್ಯಂತ ಭೈರವಾರಾಧನೆಯ ಕುರುಹುಗಳನ್ನು ನೋಡಬಹುದುದಾಗಿದೆ. ಕರ್ನಾಟಕದಲ್ಲಿಯೂ ಎರಡುನೂರಕ್ಕೂ ಹೆಚ್ಚು ಭೈರವಾರಾಧನೆಯ ಸ್ಥಳಗಳನ್ನು ಗುರುತಿಸಬಹುದು. ''ಊರಿಗೊಂದು ಚೋರೇದೇವರ ಗುಡಿ'' ಎಂಬ ಗಾದೆಯನ್ನು ನೋಡಿದರೆ ಕರ್ನಾಟಕದಲ್ಲಿ ಭೈರವ ದೇವಸ್ಥಾನದ ಬಾಹುಳ್ಯವನ್ನು ಗಮನಿಸಬಹುದು. ಆದರೆ ಭೈರವನ ಕ್ಷೇತ್ರಗಳನ್ನು ನೋಡಿದರೆ ಬಹುತೇಕ ಭೈರವನ ಮೂರ್ತಿಗಳೇ ಇಲ್ಲ. ಇದಕ್ಕೆ ಸಾಕ್ಷಿಯೆಂಬಂತೆ ೧೨ ನೇ ಶತಮಾನದ ಬಹುತೇಕ ವಚನಕಾರರು ಭೈರವನನ್ನು ಬೈದಿರುವ ಕುರುಹುಗಳು ಕಾಣಿಸುತ್ತವೆ. ಹಾಗಾಗಿ ಈ ಅಧ್ಯಯನದಲ್ಲಿ ಭೈರವನ ಶಿಥಿಲತೆಯ ಹಿಂದಿರುವ ಸಾಂಸ್ಕೃತಿಕ ಸಂಘರ್ಷವೇನು? ಎನ್ನುವುದರ ಬಗ್ಗೆ ವಿಶ್ಲೇಷಣೆ ಮಾಡಲು ಯತ್ನಿಸಿದ್ದೇನೆ.

ಹಾಗೆ ನೋಡಿದರೆ ನುಂಕೇಮಲೆಯಲ್ಲಿ ಭೈರವನ ಸ್ಪಷ್ಟಮೂರ್ತಿಯನ್ನು ಕಾಣಬಹುದು. ಇದಕ್ಕೆ ಕಾರಣವೇನು? ಇಲ್ಲಿಯ ಭೈರವನ ಮೂರ್ತಿಯು ಏಕೆ ಶಿಥಿಲವಾಗಿಲ್ಲ? ಮತ್ತು ಪ್ರಸ್ತುತ ದಿನದಲ್ಲಿಯೂ ಭೈರವನು ಜನರ ಮೇಲೆ ಮಾಡಿರುವ ಭಕ್ತಿಯ ಚಾವುಕ ಸೆಳೆತ ಎಂತಹುದು ಎನ್ನುವ ಮೂಲಭೂತ ಪ್ರಶ್ನೆಗಳ ಜೊತೆ ಮುಖಾಮುಖಿಯಾಗಿಸಲು ಯತ್ನಿಸಿದ್ದೇನೆ. ಈ ಎಲ್ಲಾ ಪ್ರಶ್ನೆಗಳಿಗೆ ಅಂತಿಮ ಉತ್ತರ ಕಂಡುಕೊಳ್ಳುವ ಪ್ರಯತ್ನ ವಿಪುಲವಾದರೂ ನನ್ನದೇ ಆದ ಒಂದು ನಿಲುವಿಗೆ ಬಂದು ನಿಲ್ಲುವಲ್ಲಿ ಸಫಲನಾಗಿದ್ದೇನೆ. ಈ ಸಫಲತೆಯೇ ಈ ಅಧ್ಯಯನದ ಮೂಲ ಆಶಯ ಎಂದು ಹೇಳಲು ಇಚ್ಛಿಸುತ್ತೇನೆ.

ಇಲ್ಲಿ ನನ್ನ ಅಧ್ಯಯನಕ್ಕೆ ಮುಖ್ಯ ಆಕರವಾಗಿ ಮೌಖಿಕ ಚರಿತ್ರೆಯನ್ನೇ ತೆಗೆದುಕೊಂಡಿದ್ದೇನೆ. ಇದು ಅಪಾರ ಕ್ಷೇತ್ರ ಕಾರ್ಯದ ಫಲಶೃತಿಯೂ ಹೌದು. ಹಾಗಾಗಿ ಮೌಖಿಕ ಚರಿತ್ರೆಯ ಮೂಲಕವೇ ಗತವನ್ನು ಕಟ್ಟಲು ಸಾಧ್ಯವಿಲ್ಲ ಎಂದು ನನಗೆ ಗೊತ್ತು, ಆದರೂ ಗತದ ಒಂದು ಎಳೆಯನ್ನಾದರೂ ಹಿಡಿದು ಲಿಖಿತಾಧಾರದೊಂದಿಗೆ ಮುಖಾಮುಖಿಯಾಗಿಸಿದ್ದೇನೆ. ಕದಂಬರ ಕಾಲದ ಶಾಸನ ಮತ್ತು ಎಂ.ರಂಗಪ್ಪ ಮೊಳಕಾಲ್ಮೂರು ಇವರು ರಚಿಸಿದ ''ನುಂಕೇಮಲೆ ಪರಮಾರ್ಥ'' ಕೃತಿಗಳು ನನಗೆ ಬಹುಮುಖ್ಯ ಲಿಖಿತಾಧಾರಗಳಾಗಿವೆ.

ನುಂಕೇಮಲೆ ಬೆಟ್ಟದಲ್ಲಿ ಈಗಲೂ ನಾಥಪಂಥದ ಸ್ವಾಮಿಯೇ ನೇಮಕಗೊಳ್ಳುತ್ತಾರೆ. ಇದಕ್ಕೆ ಕಾರಣ ನಾಥಪಂಥದ ಕೇಂದ್ರವಾದ ಮಂಗಳೂರಿನ ಕದ್ರಿಯಲ್ಲಿ ನಾಥಪಂಥದ ದೇವಸ್ಥಾನಗಳ ಪಟ್ಟಿಯಲ್ಲಿ ನುಂಕೇಮಲೆ ಬೆಟ್ಟವೂ ಸೇರಿದೆ. ಈ ಕಾರಣದಿಂದ ಈ ಕ್ಷೇತ್ರ ನಾಥಪಂಥದ ಆರಾಧನಾಕೇಂದ್ರವೂ ಆಗಿದೆ. ನಾಥಪಂಥದ ಆರಾಧನೆ ಮತ್ತು ಸ್ಥಳೀಯರ ಸಂಪ್ರದಾಯ ಆಚರಣೆಗಳನ್ನು ಪರಸ್ಪರ ಮುಖಾಮುಖಿಯಾಗಿಸುವ ಮೂಲಕ ವಿಶ್ಲೇಷಣೆಕೊಡಲು ಪ್ರಯತ್ನಿಸಿದ್ದೇನೆ.

ನುಂಕೇಮಲೆಸಿದ್ದೇಶ್ವರ ಮೌಖಿಕ ಚರಿತ್ರೆಯನ್ನು ಅವಲೋಕಿಸಿದರೆ ಆತನೊಬ್ಬ ಸಾಂಸ್ಕೃತಿಕ ನಾಯಕನಾಗಿ ನಿಲ್ಲುತ್ತಾನೆ. ಮಲೆಮಹದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗರಂತೆಯೇ ಸಾಮಾನ್ಯ ಜನರ ನೋವು ನಲಿವಿಗೆ ಸ್ಪಂದಿಸಿದ ವ್ಯಕ್ತಿಯಾಗಿ ಮೊಳಕಾಲ್ಮೂರು ಪರಿಸರದ ಜನರ ಸಾಂಸ್ಕೃತಿಕ ನಾಯಕನಾಗಿರುತ್ತಾನೆ. ರಾಕ್ಷಸರ ಹಾವಳಿಯಿಂದ ಸಾಮಾನ್ಯ ಜನರು ತತ್ತರಿಸಿಹೋಗುತ್ತಿದ್ದಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಜನಸಾಮಾನ್ಯ ಜನರ ಉಳುವಿಗಾಗಿ ಕೈಲಾಸದಿಂದ ಕಾಲ ಭೈರವ ಭೂಲೋಕಕ್ಕೆ ಬಂದನು. ದೈತ್ಯ ರಾಕ್ಷಸರಾದ ರಸಾಸಿದ್ದ ಮತ್ತು ಅಂಗ್ಸರನ್ನು ಸಂಹಾರಮಾಡಿ ಜನಸಾಮಾನ್ಯರ ಕಷ್ಟವನ್ನು ಪಾರು ಮಾಡಿದ. ಮೌಖಿಕ ಚರಿತ್ರೆಯಲ್ಲಿ ಈತನನ್ನು ಗೋವುಗಳನ್ನು ರಕ್ಷಿಸಿದ ಗೋರಕ್ಷಕನಾಥನೆಂತಲೂ ಕರೆಯುತ್ತಾರೆ. ಹಾಗಾಗಿ ಈ ನನ್ನ ಅಧ್ಯಯನದಲ್ಲಿ ನುಂಕಪ್ಪನನ್ನು ಒಬ್ಬ ಸಾಂಸ್ಕೃತಿಕ ನಾಯಕನನ್ನಾಗಿ ನೋಡಿಯೇ ವಿಶ್ಲೇಷಣೆ ಮಾಡಲಾಗಿದೆ.

ನನ್ನ ಈ ಅಧ್ಯಯನಕ್ಕೆ ತನ್ನದೇ ಆದ ವ್ಯಾಪ್ತಿಯೂ ಇದೆ. ಅಧ್ಯಯನದ ಕೇಂದ್ರ ನುಂಕೇಮಲೆ ಸಿದ್ದೇಶ್ವರ ಬೆಟ್ಟವಾಗಿದೆ. ಈವರೆಗೂ ದೊರೆಯಬಹುದಾದ ಲಿಖಿತಾಧಾರಗಳ ಆಧಾರದಿಂದ ಮೌಖಿಕ ಚರಿತ್ರೆಯ ನೆರವಿನಿಂದ ಮೂಲ, ಹಿನ್ನೆಲೆ, ಸಾಧ್ಯತೆಗಳ ಬಗೆಗೆ ಕೆಲ ಹೊಳಹುಗಳನ್ನು ಕೊಟ್ಟಿದ್ದೇನೆ. ಈ ಮೂಲಕ ಈವರೆಗೂ ಇರುವ ನುಂಕಪ್ಪನ ಚರಿತ್ರೆಯನ್ನು ಮುರಿದು ಕಟ್ಟುವ ಪ್ರಯತ್ನವನ್ನು ಮಾಡಿದ್ದೇನೆ. ಇನ್ನು ನಾಥಪಂಥವನ್ನು ಅಧ್ಯಯನಕ್ಕೆ ಪೂರಕವಾಗಿ ಆಂಶಿಕವಾಗಿ ಮಾತ್ರ ಚರ್ಚಿಸಿದ್ದೇನೆ. ಹಾಗೆಯೇ ಪ್ರಸ್ತುತ ದಿನಗಳಲ್ಲಿ ಜನರಲ್ಲಿರುವ ಆಚರಣೆ, ನಂಬಿಕೆ, ನಿಷೇಧಗಳ ಬಗೆಗೆ ವಿಶ್ಲೇಷಣೆ ಮಾಡಲಾಗಿದೆ. ಈ ಮೇಲಿನ ಅಂಶಗಳ ಮಿತಿಯಲ್ಲಿ ನನ್ನ ನಿಲುವುಗಳು ನಿಂತಿವೆ.

ಸಮಾಜವು ಜಾಗತೀಕರಣಮಯವಾಗುತ್ತಿರುವ ಈ ಹೊತ್ತಿನಲ್ಲಿಯೂ ಧಾರ್ಮಿಕ ಭಾವನೆಗಳು ಸಮಾಜದಲ್ಲಿ ಹೇಗೆ ಬೇರು ಬಿಟ್ಟಿವೆ ಎನ್ನುವುದು ನನ್ನನ್ನು ಕಾಡುವ ಪ್ರಶ್ನೆ. ಕ್ಷೇತ್ರಕಾರ್ಯದ ಅನುಭವ ಈ ಪ್ರಶ್ನೆಗೆ ಸಮಾಧಾನಕರ ಉತ್ತರವನ್ನು ನೀಡಿದೆ ಎನ್ನುವುದೇ ಬಹು ಸಮಾಧಾನ. ಹೀಗೆ ಹಲವು ಜಾತಿ, ಜನಾಂಗವನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಇಂದಿಗೂ ನುಂಕೇಮಲೆ ಬೆಟ್ಟ ಸಾಮರಸ್ಯದ ಸಂಕೇತವಾಗಿದೆ. ದೇಶದಲ್ಲಿ ಕೋಮುದಳ್ಳುರಿಗಳು ನಡೆಯುತ್ತಿರುವ ಈ ಹೊತ್ತಿನಲ್ಲಿ ಇಂತಹ ಸಾಮರಸ್ಯದ ಸಾಂಸ್ಕೃತಿಕ ಕೇಂದ್ರಗಳನ್ನು ಅಧ್ಯಯನ ಮಾಡುವ ಮೂಲಕ ದಾಖಲಿರಿಸಿ ಸಮಾಜಕ್ಕೆ ಎತ್ತಿ ತೋರಿಸಬೇಕಾಗಿದೆ. ಇಂತಹ ಒಂದು ಪ್ರಮಾಣಿಕ ಪ್ರಯತ್ನವನ್ನು ನನ್ನ ಈ ಒಂದು ಅಧ್ಯಯನ ಮಾಡಿದೆ ಎಂದು ಹೇಳಬಯಸುವೆ.

# ಅಧ್ಯಾಯ - ೨ : ನುಂಕೇಮಲೆ ಭೈರವ.

೨.೧. ನೆಲೆಗೊಂಡಿರುವ ಬಗೆಗಿನ ಕಥೆ, ಐತಿಹ್ಯ

೨.೨. ಪದನಿಷ್ಪತ್ತಿ

೨.೩. ಕ್ಷೇತ್ರದ ಸ್ಥಾಪನೆ ಮತ್ತು ಶಾಸನ ಚರಿತ್ರೆ
ಕದಂಬರ ರಾಜರ ವಂಶವೃಕ್ಷ
ಮೈಸೂರ್ ಗೆಜೆಟಿಯರ್‌ನಲ್ಲಿ ನುಂಕೇ ಭೈರವ ಗುಡ್ಡದ ವಿಚಾರದ ಸಾರ.

೨.೪ ಆಸ್ತಿ ಮತ್ತು ಆಡಳಿತ

## ೨.೧. ನುಂಕೇ ಮಲೆಭೈರವ : ನೆಲೆಗೊಂಡಿರುವ ಬಗೆಗಿನ ಕಥೆ.

ಭೂಲೋಕದಲ್ಲಿ ರಾಕ್ಷಸರ ಹಾವಳಿ ಹೆಚ್ಚಾದಾಗ ನರಮಾನವರು ಭಯಗೊಂಡು ಪರಮಾತ್ಮನನ್ನು ಸ್ಮರಣೆ ಮಾಡಿದರು ಹಾಗೂ ದೇವತೆಗಳೂ ಸಹ ಪರಮಾತ್ಮನಲ್ಲಿ ಮೊರೆ ಹೊಕ್ಕರು ಇದನ್ನರಿತ ಶಿವನು ತನ್ನ ಜಡೆಯಿಂದ ಕಾಲಭೈರವನನ್ನೂ ಇವನ ಸಹಾಯಕ್ಕಾಗಿ ಅಕ್ಕಳಾಗಿ ಕರ್ಪೂರದಮ್ಮನನ್ನು ಸೃಷ್ಟಿಸಿ ಭೂಲೋಕದಲ್ಲಿ ನಡೆಯುವ ಅನ್ಯಾಯವನ್ನು ಸುಧಾರಿಸಲು ಅಥವಾ ದುಷ್ಟರನ್ನು ಶಿಕ್ಷಿಸುತ್ತಾ ಶಿಷ್ಟರನ್ನು ರಕ್ಷಣೆ ಮಾಡಲು ಮುಂದಾದನು. ಹೀಗೆ ಭೂಲೋಕದಲ್ಲಿ ಸಂಚರಿಸುತ್ತಿರುವಾಗ ಕೂಡ್ಲಿಗಿ ತಾಲ್ಲೂಕಿನ ಉಜ್ಜನಿ ಎಂಬಲ್ಲಿಗೆ ಬಂದು ಅಲ್ಲಿ ಬರಗಾಲದಿಂದ ತತ್ತರಿಸಿದ ಜನಗಳಿಗೆ ತನ್ನ ಮಹಿಮೆಯನ್ನು ತೋರಿಸಿದ. ಮರಳನ್ನು ಕಪ್ಪೆ ಮಾಡಿ ಮರುಳ ಸಿದ್ದೇಶನೆಂದು ಹೆಸರಿಟ್ಟು ಇದನ್ನು ಪೂಜಿಸುತ್ತಾಹೋಗಿ ನಿಮಗೆ ಒಳ್ಳೆಯದಾಗುತ್ತದೆ ಎಂದು ಹೇಳಿ ಹೋದನು. ಅಲ್ಲಿಂದ ಅದು ಮರುಳಸಿದ್ದೇಶನ ಪ್ರಮುಖ ಕ್ಷೇತ್ರವಾಯ್ತು. ಅಲ್ಲಿಂದ ಮುಂದೆ ಚಳ್ಳಕೆರೆ ತಾಲ್ಲೂಕು ನಾಯಕನಹಟ್ಟಿಯ ಹತ್ತಿರ ಡೊಣ ಮಾಂಡ್ಲಹಟ್ಟಿಯಲ್ಲಿ ಬೇಡರಾದ ಕಾಟಣ್ಣ. ಬೋಸಯ್ಯ ಎಂಬುವರು ಪರಮಭಕ್ತರಾದರು. ಇವರು ಬೇಟೆಯಾಡುವುದರಲ್ಲಿ ನಿಸ್ಸಿಮರಾಗಿದ್ದು ದುಷ್ಟಶಕ್ತಿಗಳನ್ನು ಸದೆಬಡಿಯುತ್ತಿದ್ದರು. ಹೀಗೆ ಉತ್ತರದ ಕಡೆಗೆ ಸಂಚರಿಸುತ್ತಾ ಕುಮುತಿಯ ಬಳಿ ತಂಪಾದ ಜಿನಿಗಿ ಹಳ್ಳದ ದಡದಲ್ಲಿ ಬೀಡು ಬಿಟ್ಟರು. ಹೀಗಿರುವಾಗ ರಸಾಸಿದ್ದನ ವಾಹನವಾದ ಕೋಣವನ್ನು ಹುಡುಕುತ್ತಾ ಬಂದ ರಕ್ಕಸರಿಂದ ನುಂಕೇಮಲೆಯ ಬೆಟ್ಟದಲ್ಲಿವಾಸವಾಗಿರುವ ರಾಕ್ಷಸರ ರಹಸ್ಯವನ್ನು ಗಮನಿಸಿದನು. ಹೀಗಿರುವಾಗ ಬಲ್ಲಾಳಕಾಯನೂ, ಹರಳಯ್ಯನೂ ಪರಮಭಕ್ತರಾದರು. ಅಲ್ಲಿಂದ ಪೂರ್ವದಿಕ್ಕಿನ ಕಡೆಯಿರುವ ಮೊಳಕಾಲ್ಮೂರು ನುಂಕೇಮಲೆಯ ಬೆಟ್ಟಗಳು ಆತನಿಗೆ ಘನಘೋರವಾಗಿ ಕಂಡವು. ಉತ್ಸಾಹ ಭರಿತನಾದ ಭೈರವನು ಅಕ್ಕನ ಅಪ್ಪಣೆಯನ್ನು ಪಡೆದು ಈ ಬೆಟ್ಟಕ್ಕೆ ಪ್ರಯಾಣ ಬೆಳೆಸಿದನು. ಮೇಲುಗಿರಿಯಲ್ಲಿ ರಕ್ಕಸರು ವಾಸಮಾಡುವುದನ್ನು ಗಮನಿಸಿ ತನ್ನ ಮಾಯಾಕುದುರೆಯೊಂದಿಗೆ ಬೆಟ್ಟವನ್ನು ಹತ್ತಿಸುವನು.

ಹೀಗೆ ಭೈರವನು ಬೆಟ್ಟವನ್ನು ಹತ್ತಿಸುವಾಗ ಮಾರ್ಗ ಮಧ್ಯದಲ್ಲಿ ಕುದುರೆಯ ಲಗಾಮು ಹರಿಯುತ್ತದೆ. ಅದೇ ಸಂದರ್ಭದಲ್ಲಿ ಹರಳಯ್ಯನು ಆ ಬೆಟ್ಟದ ತಪ್ಪಲಿನ ಪ್ರದೇಶದಲ್ಲಿ ಸೌದೆಗಳನ್ನು ಸಂಗ್ರಹಿಸುತ್ತಾನೆ. ಸಂಕಷ್ಟಕ್ಕೆ ಸಿಲುಕಿದ ಭೈರವನು ತನ್ನ ತಂದೆಯಾದ ಪರಶಿವನನ್ನು ಸ್ಮರಿಸುತ್ತಿರುವಾಗ ಅಂತಹ ಕಷ್ಟವನ್ನರಿತ ಹರಳಯ್ಯನು ಸಹಾಯ ಮಾಡಲು ಮುಂದಾದನು. ಕುದುರೆಯ ಲಗಾಮಾಗಿ ತನ್ನ ಚರ್ಮವನ್ನೇ ಕಿತ್ತುಕೊಟ್ಟನಂತೆ. ಭೈರವನು ಅದನ್ನು ಲಗಾಮಾಗಿ ಮಾಡಿಕೊಂಡು ಮುಂದಿನ ಪ್ರಯಾಣ ಬೆಳೆಸುತ್ತಾನೆ. ಇದರ ಕೃತಜ್ಞತೆಗಾಗಿ ಭೈರವನು ಹರಳಯ್ಯನ ಎರಡು ಬೇಡಿಕೆಗಳನ್ನು ನೆರವೇರಿಸಿಕೊಡುತ್ತಾನೆ. ಅದೇನೆಂದರೆ : ಈ ಕ್ಷೇತ್ರ ನಿನ್ನ ಕೈವಶವಾದರೆ ಈ ಹೊಂಡದಲ್ಲಿ ಜಾತಿ ಭೇದವಿಲ್ಲದೆ ನೀರನ್ನು ಬಳಸಬೇಕೆಂಬುದು ಮತ್ತು ಇಲ್ಲಿಗೆ ಬರುವ ಭಕ್ತರಿಂದ ಮೊದಲು ಪೂಜೆ ನನಗೆ ಸಲ್ಲಬೇಕೆಂಬುದು. ಹೀಗೆ ಹರಳಯ್ಯನ ಸಹಾಯದಿಂದ ಭೈರವನು ಮುಂದೆ ಪ್ರಯಾಣ ಬೆಳೆಸಿ ಮೇಲುಗಿರಿಯಲ್ಲಿ ರಸಾಸಿಥ ಅಂಗ್ಲರೆಂಬ ರಾಕ್ಷಸರಿರುವರೆಂದೂ ಅವರಲ್ಲಿ ಏಳು ಕೊಪ್ಪರಿಗೆ ವಿಷವುಂಟೆಂದೂ ಹರಳಯ್ಯನಿಂದ ತಿಳಿಯುತ್ತದೆ. ಅವರನ್ನು ಜಯಿಸಲು ಸುಲಭದ ಮಾತಲ್ಲ ಅವರೊಡನೆ ಕಾದಾಡಿ ಮೂರ್ಛಿತನಾಗಿರುತ್ತಾನೆ. ಇತ್ತ ಅಕ್ಕಳಾದ ಕರ್ಪೂರದಮ್ಮನು ತಮ್ಮನಿಗೆ ಯಾವುದೋ ಕಷ್ಟ ಒದಗಿಬಂದಿರಬಹುದೆಂದು ಗಾಬರಿಯಿಂದ ಕುಮುತಿಯಿಂದ ಬೇಡರಾದ ಕಾಟಣ್ಣ, ಬೋಸಯ್ಯ ನೂರಾ ಒಂದು ನಾಯಿಗಳ ಕಂಪಳದೊಂದಿಗೆ ಬರುತ್ತಾಳೆ. ಆಗ ಕೋಟೆಯೊಳಗೆ

ಒಳಹೋಗಲು ದಾರಿಯೇ ಇರುವುದಿಲ್ಲ ತನ್ನ ಜನಕೆಯ ಸಹಾಯದಿಂದ ದಾರಿಮಾಡಿಕೊಂಡು ಒಳ ಹೋಗುತ್ತಾನೆ. ಅಲ್ಲಿ ರಕ್ಕಸರೊಂದಿಗೆ ಕಾದು ಮೂರ್ಛಿತನಾದ ತಮ್ಮನ ಹತ್ತಿರ ಹೋಗಿ ತನ್ನ ತಂದೆಯನ್ನು ಸ್ಮರಿಸಿ ತನ್ನ ತಮ್ಮನಿಗೆ ಸೆರಗಿನಿಂದ ನೀರು ಹಿಂಡಿ ಎಬ್ಬಿಸಿ ರಕ್ಕಸರು ಅಸಾಧ್ಯವಾದವರು ಅವರ ಗೋಜಿಗೆ ಏಕೆ ಹೋದೆಯಾ ಎಂದು ಬುದ್ಧಿಮಾತುಗಳನ್ನು ಹೇಳುತ್ತಾಳೆ. ರಕ್ಕಸರ ರಹಸ್ಯವನ್ನು ತಿಳಿದು ಆ ವಿಷವನ್ನು ಖಾಲಿ ಮಾಡಲು ಜೋಗಿಯ ವೇಷವನ್ನು ಧರಿಸಿ ಅವರು ಇಲ್ಲದ ವೇಳೆಯಲ್ಲಿ ರಾಕ್ಷಸರ ದಾಸಿಯರ ಹತ್ತಿರ ಬಿಕ್ಷೆಗೆಂದು ಹೋಗುತ್ತಾನೆ. ಅವರು ನಮ್ಮ ಹತ್ತಿರ ಆಹಾರವಿಲ್ಲ ವಿಷವೇ ನಮಗೆ ಆಹಾರವೆಂದರು. ನೀನು ಅಷ್ಟು ಸುಲಭವಾಗಿ ಇಲ್ಲಿಗೆ ಹೇಗೆ ಬಂದಿರಿ ಇಲ್ಲಿಗೆ ನರಮಾನವರು ಅಷ್ಟು ಸುಲಭವಾಗಿ ಬರಲು ಸಾಧ್ಯವಿಲ್ಲ ಇವನಾರೋ ದೈವ ಪುರುಷನಿರಬೇಕೆಂದು ಅವರಿಗೆ ಅನುಮಾನವಾಯ್ತು. ಆದರೂ ಸಹ ನಿಮಗೆ ಗಂಡಂದಿರಿಲ್ಲದೇ ಸಂತಾನ ಭಾಗ್ಯ ನೀಡುತ್ತೇನೆಂದು ಅವರಲ್ಲಿ ಆಸೆ ಹುಟ್ಟಿಸಿ ತನ್ನವೊಂದು ಉಪಾಯದಿಂದ ವಿಷವನ್ನೆಲ್ಲಾ ಖಾಲಿಮಾಡಿ, ಮುಂದೆ ಘೋರವಾದ ಭೈರವನ ರೂಪತಾಳಿ ರಕ್ಕಸರನ್ನು ಸಂಹಾರ ಮಾಡಲು ಮುಂದಾದನು.

ರಸಾಸಿದ್ಧ ಎಂಬ ರಕ್ಕಸನನ್ನು ಸಂಹರಿಸಿದ ಆದರೆ ಅಂಗ್ಸನೆಂಬ ದೈತ್ಯನನ್ನು ಜಯಿಸಲು ಸುಲಭದ ಮಾತಲ್ಲ ಅವನ ಒಂದು ರಕ್ತದ ಹನಿ ನೆಲಕ್ಕೆ ಬಿದ್ದರೆ ಕೋಟಾನುಗಟ್ಟಲೆ ರಾಕ್ಷಸರ ಸಮೂಹವಾಗುತ್ತದೆ. ಹಾಗೆ ಇವನು ರಕ್ತಬೀಜಾಸುರನಾಗಿರುತ್ತಾನೆ. ಬೇಡರಾದ ಕಾಟಣ್ಣ ಜೋಸಯ್ಯನವರ ನೂರಾ ಒಂದು ನಾಯಿಗಳ ಸಹಾಯದಿಂದ ಅಂಗ್ಸನ ಸಂಹಾರವಾಗುತ್ತದೆ. ಭಯಗೊಂಡ ರಕ್ಕಸರ ದಾಸಿಯರು ಭೂಲೋಕದ ಮಾರ್ಗವಾಗಿ ಇಳಿದು ಹೋಗುತ್ತಿರುವವರನ್ನು ಕಂಡು ಭೈರವನು ಅವರ ಜುಟ್ಟುಹಿಡಿದು ಮೇಲಕ್ಕೆತ್ತಿ ನಿಮ್ಮಿಂದ ನನಗೆ ತುಂಬಾ ಉಪಕಾರವಾಯ್ತು ತಮ್ಮಿಂದೇನಾದರೂ ಉಪಕಾರ ಬೇಕೇ ಎಂದಾಗ ನುಂಕವ್ವ ಮಲಿಯವ್ವ ಇವರೀರ್ವರೂ ತಮ್ಮ ಈ ಕ್ಷೇತ್ರಕ್ಕೆ ತಮ್ಮ ಹೆಸರು ನಿಮ್ಮ ಹೆಸರಿನೊಡನೆ ಸೇರಿಸಿ ಇಡಬೇಕೆಂದು ಕೇಳಿಕೊಂಡಾಗ ಈ ಕ್ಷೇತ್ರಕ್ಕೆ ನುಂಕೇಮಲೆ ಸಿದ್ದೇಶ ಎಂದು ಹೆಸರಿಡಲಾಯಿತು. ಇಂದಿಗೂ ಸಹ ಈತನ ದೇವಾಲಯದೊಳಗೆ ನುಂಕವ್ವ-ಮಲಿಯವ್ವ ಇವರ ವಿಗ್ರಹಗಳನ್ನು ನೋಡಬಹುದು. ನಂತರ ದ್ರೋಣಾದ್ರಿಮಲೆಗೆ ಅಧಿಪತಿಯಾದ ಭಂಡಿಯನ್ನು ಸಂಹರಿಸಿ ಅವಳ ಎಲುಬು, ಉಗುರುಗಳಿಂದ ರಥವನ್ನು ತಯಾರಿಸಿದೆನೆಂದು ಹೇಳುತ್ತಾನೆ.

ನುಂಕೇಮಲೆ ಭೈರವನು ದೈತ್ಯರೆನ್ನೆಲ್ಲಾ ಸಂಹರಿಸಿ ಪೂರ್ವ ದಿಕ್ಕಿನ ಕಡೆ ಹೋಗಲು ಪ್ರಯತ್ನಿಸುತ್ತಾನೆ. ಆಗ ಕರ್ಪೂರದಮ್ಮನು ಇವನಿಗೆ ಏನು ಹೇಳಿದರೂ ಕೇಳುವುದಿಲ್ಲವೆಂದು ತಿಳಿದು ಕೆಳಗಡೆ ಝರಿಯಲ್ಲಿ ಬೆತ್ತಲೆಯಾಗಿ ಸ್ನಾನ ಮಾಡುವಳು ಇದನ್ನು ಗಮನಿಸಿದ ಭೈರವನು ಹಿಂದಕ್ಕೆ ತಿರುಗಿದನು. ಆಗ ಕರ್ಪೂರದಮ್ಮ ನಿನ್ನ ಅವತಾರಗಳನ್ನು ಇಲ್ಲಿಗೆ ಮುಕ್ತಾಯ ಮಾಡಿ ಇಲ್ಲಿಯೇ ನೆಲೆ ನಿಲ್ಲಬೇಕೆಂದು ಕೇಳಿಕೊಳ್ಳುತ್ತಾಳೆ. ಆದ್ದರಿಂದ ಭೈರವ ಸ್ವಾಮಿಯು ಅಲ್ಲಿಯೇ ಐಕ್ಯವಾಗುತ್ತಾನೆ.

ಈತನನ್ನು ಈಗ ನುಂಕಪ್ಪ, ಕಾಲಭೈರವ, ನುಂಕೇಮಲೆಭೈರವ, ನುಂಕೇಮಲೆ ಸಿದ್ದೇಶ್ವರ, ಜೋಗಿ ಎಂಬುದಾಗಿಯೂ ಸಹ ಕರೆಯುತ್ತಾರೆ.

ನೆಲೆಗೊಂಡಿರುವ ಬಗೆಗಿನ ಐತಿಹ್ಯ :

ಸುಂಕೇಮುಳೆಯ ಪಕ್ಕದಲ್ಲಿರುವ ಭೈರಾಪುರದಲ್ಲಿ ವೀರಶೈವ ಜನಾಂಗದ ಅಕ್ಕ - ತಮ್ಮಂದಿರಿಬ್ಬರು ಎತ್ತಿನ ವ್ಯಾಪಾರ ಮಾಡುತ್ತಿದ್ದರು. ಇವರು ಚಳ್ಳಕೆರೆಯಿಂದ ಎತ್ತುಗಳನ್ನು ಖರೀದಿಸಿ ಬಳ್ಳಾರಿಗೆ ಹೋಗಿ ಮಾರಿ ಬರುತ್ತಿದ್ದರು. ಹೀಗಿರುವಾಗ ಒಂದುದಿನ ರಾತ್ರಿ ಭೈರಾಪುರದ ಪಕ್ಕದಲ್ಲಿ ಕಟ್ಟಿಹಾಕಿರುವ ಎತ್ತುಗಳು ಮೂರ್ಛೆಹೋಗಿದ್ದವಂತೆ. ಮುರಿಸ್ವಾಮಿ ಮಠದಲ್ಲಿ ಗಂಗಾಧರಯ್ಯ ಎಂಬ ಸ್ವಾಮಿಯ ಹತ್ತಿರ ಜೋತಿಷ್ಯವನ್ನು ಕೇಳಿಸಿದಾಗ ಈತ ಈ ರೀತಿ ಹೇಳಿದನು. ದಕ್ಷಿಣ ದಿಕ್ಕಿನ ಎರಡು ಗುಡ್ಡಗಳ ಮಧ್ಯ ಒಂದು ಸೀಗೆ ಪೊದೆಯಲ್ಲಿ ಒಬ್ಬ ಮಹಾತ್ಮನ ಮೂರ್ತಿಯೂ ಅದರ ಪಕ್ಕದಲ್ಲಿ ಒಂದು ಹೆಣ್ಣು ದೇವತೆಯ ಮೂರ್ತಿಯೂ ಇರುವುದು ಇವುಗಳನ್ನು ಪತ್ತೆಮಾಡಿ ಪೂಜಿಸಿ ತಂದ ತೀರ್ಥವನ್ನು ಅವುಗಳಿಗೆ ಚೆಲ್ಲಿದರೆ ಎತ್ತುಗಳು ಬದುಕುತ್ತವೆ ಎಂದು ಹೇಳಿದನು.

ಅವರು ಅದೇ ರೀತಿಯಾಗಿ ಸೀಗೆಪೊದೆಯಲ್ಲಿರುವ ಮೂರ್ತಿಗಳನ್ನು ಪತ್ತೆ ಹಚ್ಚಿ ಸ್ವಾಮಿಯ ತೀರ್ಥವನ್ನು ಎತ್ತುಗಳಿಗೆ ಚೆಲ್ಲಿದಾಗ ಬದುಕುಳಿದವು. ಭೈರವನ ಮಹಿಮೆಯನ್ನರಿತ ಅವರು ಮೊದಲು ಚಿಕ್ಕ ಗುಡಿಗಳನ್ನು ನಿರ್ಮಿಸಿ, ವ್ಯಾಪಾರ ಮಾಡುತ್ತಿರುವ ಅಕ್ಕ - ತಮ್ಮಂದಿರಿಬ್ಬರ ಮಕ್ಕಳನ್ನೂ ಸಹ ಸ್ವಾಮಿಯ ಸೇವೆ ಮಾಡಲು ಬಿಟ್ಟರು. ಕಾಲಾನುಕ್ರಮದಲ್ಲಿ ಈ ದೇವಸ್ಥಾನಗಳು ಜೀರ್ಣೋದ್ಧಾರವಾಗಿ ಇನ್ನುಳಿದ ದೇವಾಲಯಗಳು ಸಹ ಬೆಳಕಿಗೆ ಬಂದಿರಬಹುದು.

ಇದು ಸತ್ಯವೆಂಬಂತೆ ಇಂದಿಗೂ ಸಹ ಭೈರವನ ಪೂಜಾರಿಗಳಲ್ಲಿ ಹೆಣ್ಣು ಮಕ್ಕಳ ಕಡೆಯ ಪೂಜಾರಿಗಳೆಂದೂ ಮತ್ತು ಗಂಡು ಮಕ್ಕಳ ಕಡೆಯ ಪೂಜಾರಿಗಳೆಂದೂ ಪಕ್ಕದ ಪೂಜಾರಿ ಹಟ್ಟಿಯಲ್ಲಿ ಕಂಡು ಬರುತ್ತಾರೆ. ಈಗ ಅವರು ಒಪ್ಪಂದದ ಮೇರೆಗೆ ವರ್ಷಾ ಒಂದು ಕಡೆಯವರು ಭೈರವ ಸ್ವಾಮಿಯನ್ನು ಪೂಜಿಸಿ ಸ್ವಾಮಿಯ ಸೇವೆಗೆ ಪಾತ್ರರಾಗುತ್ತಾರೆ.

## ೨.೨ : ಪದನಿಷ್ಪತ್ತಿ

**ನುಂಕೇಮಲೆ ಸಿದ್ಧೇಶ್ವರ :** ಪೌರಾಣಿಕ ಕಥೆಯ ಆಧಾರದ ಮೇಲೆ ವಿಶ್ಲೇಷಿಸುವುದಾದರೆ ಕಾಲ ಭೈರವನು ರಸಾಸಿದ್ದನನ್ನು ಸಂಹಾರ ಮಾಡಿದಾಗ ಅಕ್ಕ ಕರ್ಪೂರದಮ್ಮ ಇಲ್ಲಿಯೇ ನೆಲೆಸುವಂತೆ ಕೇಳಿಕೊಳ್ಳುತ್ತಾರೆ. ಇದರ ಫಲವಾಗಿ ಭೈರವ ಇದೇ ಸ್ಥಳದಲ್ಲಿ ನೆಲೆಯೂರುತ್ತಾನೆ. ಆಗ ರಸಾಸಿದ್ದನ ನಾಶದಿಂದ ಭಯಗೊಂಡ ನುಂಕಪ್ಪ - ಮಲಿಯಪ್ಪ ಭೂಮಿಯಲ್ಲಿ ಹೂತು ಹೋಗಲು ಪ್ರಯತ್ನಿಸುತ್ತಾರೆ. ಆಗ ತಲೆಯ ಭಾಗ ಮಾತ್ರ ಉಳಿದು ದೇಹ ಭೂಮಿಯೊಳಗೆ ಲೀನವಾಗುತ್ತದೆ. ಆಗ ಭೈರವ ಇವರನ್ನು ನೋಡಿ ರಸಾಸಿದ್ದನ ಸಂಹಾರಕ್ಕಾಗಿ ಸಹಕರಿಸಿದ್ದಕ್ಕೆ ನಿಮಗೆ ಏನು ಬೇಕು ಕೇಳಿ ಎನ್ನುತ್ತಾನೆ. ಆಗ ನುಂಕಪ್ಪ ಮಲಿಯಪ್ಪ ನಾವು ಇಲ್ಲಿ ನೆಲೆಸಿದ್ದರೆ ನೆನಪಿಗಾಗಿ ನುಂಕಪ್ಪನ ಹೆಸರಿನಿಂದ 'ನುಂಕೆ' ಯನ್ನು ಮಲಿಯಪ್ಪನ ಹೆರಿನಿಂದ 'ಮಲೆ' ಯನ್ನೂ ರಸಾಸಿದ್ದನ ಹೆರಿನಿಂದ ಸಿದ್ದನನ್ನು ತೆಗೆದುಕೊಂಡು ಕೊನೆಗೆ ನಿಮ್ಮ ತಂದೆಯ ಹೆಸರಾದ ಈಶ್ವರನ ಹೆಸರನ್ನು ಸೇರಿಸಿಕೊಂಡು ಈ ಪ್ರದೇಶದಲ್ಲಿ ನೆಲೆಗೊಳ್ಳು ಎಂದು ಕೇಳಿಕೊಳ್ಳುತ್ತಾರೆ. ಆಗ ಭೈರವನು ಈ ಮೂವರ ನೆನಪಿಗಾಗಿ ನನ್ನ ಹೆಸರನ್ನು 'ನುಂಕೆ ಮಲೆ ಸಿದ್ದೇಶ್ವರ' ಎಂದು ನಾಮಕರಣ ಮಾಡಿ ಕೊಂಡುದುಂದಾಗಿ ನೋಡಬಹುದು.

**''ಲುಂಕಪ್ಪ'' :** ಈಗಲೂ ಮೊಳಕಾಲ್ಮೂರು ಪರಿಸರದ ಭಕ್ತರು 'ಲುಂಕಪ್ಪ' ಎಂತಲೂ ಕರೆಯುತ್ತಾರೆ. ಹಾಗೆಯೇ ಲುಂಕೇಮಲೆಸಿದ್ದೇಶ್ವರ ಎನ್ನುವ ಹೆಸರೂ ಸಹ ಬಳಕೆಯಾಗುತ್ತದೆ. ಇದರ ಹಿನ್ನೆಲೆಯನ್ನು ನೋಡುವುದಾದರೆ 'ಲಂಕ' - ಲೆಂಕ ಎಂಬ ಶಬ್ದಗಳು 'ಲುಂಕೆ' ಎಂಬ ಈ ಕ್ಷೇತ್ರದ ಮೂಲನಾಮಕ್ಕೆ ಸಮೀಪದ ಪದಗಳಾಗಿವೆ. ತಿರುಕನೆಂಬ ಅರ್ಥವುಳ್ಳ 'ರಂಕ' ಶಬ್ದದ 'ರ' ಕಾರಕ್ಕೆ 'ಲ' ಕಾರವನ್ನು ಬಳಸಿರಬಹುದೆಂದು ಊಹಿಸಬಹುದು. ಆಂಧ್ರದ ಗಡಿಭಾಗದ ಪ್ರದೇಶವಾಗಿರುವ ಈ ಪರಿಸರದಲ್ಲಿ ತೆಲುಗಿನ ಪ್ರಭಾವ ನಿಚ್ಚಳವಾಗಿ ಕಾಣಿಸುತ್ತದೆ. ಈ ನೆಲೆಯಲ್ಲಿ ನೋಡುವುದಾದರೆ 'ರಂಕ' ಎಂದರೆ ತೆಲುಗಿನಲ್ಲಿ 'ಪೋಕರಿ' ಎಂಬ ಕೆಟ್ಟ ಅರ್ಥ ಬರುತ್ತದೆ. ಹಾಗಾಗಿ 'ಲ' ಕಾರವನ್ನು ಬದಲಾಯಿಸಿ ಲಂಕ ಎಂದು ಬಳಸಿರಬಹುದು. 'ಲುಂಕ' ಎಂದರೆ 'ತಿರುಕ' ಎನ್ನುವುದನ್ನು ನೋಡುವುದಾದರೆ ಕಾಲ ಭೈರವ ತಿರುಕನ ಜೋಗಿ ವೇಷ ಧರಿಸಿ ನುಂಕಪ್ಪ ಮಲಿಯಪ್ಪರ ಬಳಿ ವಿಷವನ್ನು ಬಿಕ್ಷೆಯಾಗಿ ಬೇಡಿದ್ದರ ಕುರುಹಿನಿಂದಾಗಿ 'ಲುಂಕೆ' ಎಂಬ ಪದ ಬಂದಿರಲು ಸಾಧ್ಯವಿದೆ.

'ಲಂಕ' ಎಂದರೆ ಭಕ್ತ ಎನ್ನುವ ಅರ್ಥದಲ್ಲಿ ಬಳಕೆಯಾಗುತ್ತಿದ್ದುದು ಈ ಮೇಲಿನ ವಿವರಣೆಯಿಂದ ತಿಳಿಯಬಹುದಾಗಿದೆ. ಮೂಲದಲ್ಲಿ 'ತಿರುಕ' ನೆಂಬ ಅರ್ಥವುಳ್ಳ 'ರಂಕ' ಅದೇ ಪದ 'ಬಂಕ' ವಾಗಿ ದಾಸೋಹ ಪರಿಕಲ್ಪನೆಯಲ್ಲಿ ಬೇಡುವ ತಿರುಕನಾಗಿ ಭಾವಪರಿವರ್ತನೆಯಾಗಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

**''ಶ್ರೀ ಪರ್ವತ'' :** ನುಂಕೇಮಲೆ ಸಿದ್ದೇಶ್ವರನು ವಾಸವಾಗಿರುವ ಈ ಪರ್ವತವನ್ನು ಭಕ್ತಿ ಪೂರ್ವಕವಾಗಿ ಭಕ್ತರು ಶ್ರೀ ಪರ್ವತ ಎಂತಲೂ ಕರೆಯುವ ವಾಡಿಕೆಯನ್ನು ನೋಡಬಹುದು. ಈ ನಾಮಕರಣಕ್ಕೆ ಪುರಾವೆಗಳು ನಮಗೆ ಸಿಗುವುದರಿಂದ ಈ ಪದಬಳಕೆ ಇಲ್ಲಿ ದೊರೆಯುವ ಶಾಸನಗಳಲ್ಲಿ 'ಲುಂಕೇಶ' ಎಂಬುದಾಗಿಯೂ ಸಹ ಬಳಕೆ ಗೊಂಡಿದ್ದರಿಂದ ಈ ಪದ ೧೦ ನೇ ಶತಮಾನದಷ್ಟು ಹಿಂದಿನದು ಎಂದು ಕದಂಬರ ರಾಜರ ಶಾಸನಗಳಿಂದ ತಿಳಿಯಬಹುದು.

ಶಿಕಾರಿಪುರದ ಶಾಸನ ೧೭೬ ಪಂಕ್ತಿ ೫ ರಲ್ಲಿ ತ್ರಿಪರ್ವತವೆಂದೂ ಬರೆಯಲ್ಪಟ್ಟಿರುವುದರಿಂದ ಆ ತ್ರಿ ಪರ್ವತವೂ ಉಚ್ಛಂಗಿದುರ್ಗವೂ ಒಂದೇ ಆಗಿರಬೇಕೆಂದು ಸಂಶೋಧನಾಕಾರರಾದ ಶ್ರೀ ಗೋವಿಂದಪೈರವರು ಅಭಿಪ್ರಾಯ ಪಡುತ್ತಾರೆ. ಈ ಶಾಸನದಲ್ಲಿ ''ಅಧ್ಯುವಾಸ ದುರ್ಗಮಾಮಟವೀಂ ತ್ರಿಪರ್ವತಾಸ್ತರ ಸಂಸ್ಥಿತಾಮ್'' ಎಂಬ ಉಲ್ಲೇಖವನ್ನು ಕಾಣಬಹುದು. ಈ ತ್ರಿಪರ್ವತವೇ ಇಂದು ಜನರ ಬಳಕೆಯಲ್ಲಿ ಶ್ರೀ ಪರ್ವತವಾಗಿರುವುದು ವೇದ್ಯವಾಗುತ್ತದೆ. ಈ ಶಾಸನದ ಉಕ್ತಿಯನ್ನು ಗಮನಿಸಿದರೆ ಮಯೂರಶರ್ಮನು ಶತ್ರು ಭೀತಿಯಿಂದ ದುರ್ಗಮವಾದ ತ್ರಿಪರ್ವತಾಂತರದಲ್ಲಿ ಮರೆಯಾಗಿದ್ದನೆಂದು ಈ ಶಾಸನದ ತಾತ್ಪರ್ಯ ತಿಳಿಯುತ್ತದೆ.

ಈ ಶಾಸನವನ್ನು ಆಧರಿಸಿ ನೋಡುವುದಾದರೆ ಹರಪನಹಳ್ಳಿಯ ಬಳಿಯಿರುವ ಉಚ್ಛಂಗಿದುರ್ಗಕ್ಕೂ ಮತ್ತು ನುಂಕೇಮಲೆಗೂ ಅಂತರಿಕ ಸಂಬಂಧವನ್ನು, ಕೊಡುಕೊಳ್ಳುಗಳನ್ನು ಗುರುತಿಸಬಹುದಾಗಿದೆ. ಈ ಕ್ಷೇತ್ರದ ತುಪ್ಪದಮ್ಮನನ್ನೇ ಹೋಲುವ ವಿಗ್ರಹವು ಅಲ್ಲಿ ಉಚ್ಛಂಗಮ್ಮನೆನಿಸಕೊಂಡಿದೆ. ಉಚ್ಛಂಗಿ ಕ್ಷೇತ್ರದಲ್ಲಿ 'ಬನವಾಸಿ' ಎಂಬ ಹೆಸರಿದೆ. ಲಂಕ-ಲೆಂಕ ಶಬ್ದಗಳ ಸಮೀಪ ಸಂಬಂಧಿಯಾದ 'ಲುಂಕೆ' ಎಂಬ ಶಾಸನಶಬ್ದವಿದೆ. ಈ ಆಧಾರದಿಂದ ಉಚ್ಛಂಗಿ ದುರ್ಗಕ್ಕೂ ನುಂಕೇಮಲೆ ಪರಿಸರಕ್ಕೂ ಕರುಳು ಬಳ್ಳಿಯ ಸಂಬಂಧವಿದೆಯೆಂದು ಗುರುತಿಸಬಹುದು.

**''ದೇವರ ಗುಡ್ಡ''** : ಮೊಳಕಾಲ್ಮೂರು ಪರಿಸರದ ನುಂಕಪ್ಪನ ಭಕ್ತರು ಭಕ್ತಿಯ ಆವೇಶದಲ್ಲಿ ನುಂಕೇಮಲೆ ಬೆಟ್ಟವನ್ನು 'ದೇವರ ಗುಡ್ಡ' ಎಂತಲೂ ಕರೆಯುತ್ತಾರೆ. ಈ ನಾಮಕರಣಕ್ಕೆ ಅಂತಹ ಹಿನ್ನೆಲೆ ಸಿಗುವುದಿಲ್ಲ. ಹಾಗಾಗಿ ''ನುಂಕೇಮಲೆ ಸಿದ್ದೇಶ್ವರನ ಗುಡ್ಡ'' ಎಂದು ಜನಬಳಕೆಯಲ್ಲಿ ಬಳಸಲು ಧೀರ್ಘವಾಗಿರುವುದರಿಂದ ಪ್ರೀತಿಯಿಂದ ನುಂಕೆ ಮಲೆಸಿದ್ದೇಶ್ವರ ದೇವರು ವಾಸವಾಗಿರುವ ಈ ಗುಡ್ಡವನ್ನು ದೇವರ ಗುಡ್ಡ ಎಂದು ಕರೆದಿರಲು ಶಕ್ಯವಿದೆ. ಈ ಹೆಸರು ಭಕ್ತಾದಿಗಳಲ್ಲಿ ಒಂದು ರೀತಿಯ ಭಕ್ತಿಯ ಭಾವುಕತೆಯನ್ನು ತರಿಸುತ್ತದೆ. ಈ ಕಾರಣದಿಂದಾಗಿಯೇ ಮೊಳಕಾಲ್ಮೂರು ಪರಿಸರದ ಎಲ್ಲಾ ಭಕ್ತಾದಿಗಳು ದೇವರ ಗುಡ್ಡವೆಂತಲೇ ಕರೆಯುತ್ತಾರೆ.

**ಜೋಗಿ (ಗೋರಕ್ಷನಾಥ)** : ಕಾಲಭೈರವನ ದೇವಸ್ಥಾನದ ಎಡಭಾಗಕ್ಕೆ ಗೋರಕ್ಷನಾಥ ದೇವಸ್ಥಾನವನ್ನು ಕಾಣಬಹುದು. ಇಲ್ಲಿ ಗೋರಕ್ಷನಾಥನನ್ನು 'ಜೋಗಿ' ಎಂದು ಭಕ್ತಾದಿಗಳು ಕರೆಯುತ್ತಾರೆ. 'ಜೋಗಿ' ಎನ್ನುವ ಪದ ಯೋಗಿ ಎನ್ನುವ ಪದದಿಂದ ಬಂದಿರಬಹುದುದೆಂದು ತಿಳಿಯಬಹುದು. ಈ ಹಿಂದೆ ದುರ್ಗಮವಾದ ಈ ಬೆಟ್ಟವುಧ್ಯಾನಕ್ಕೆ ಯೋಗ್ಯವಾದ ಸ್ಥಳವಾಗಿದ್ದು ಇಲ್ಲಿ ನಾಥಪಂಥದ ಯೋಗಿಗಳು ಧ್ಯಾನಕ್ಕಾಗಿ ಈ ಸ್ಥಳಕ್ಕೆ ಬರುತ್ತಿದ್ದರೆಂದು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ 'ಯೋಗಿ' ಎಂಬ ಪದವೇ ಇಲ್ಲಜೋಗಿಯಾಗಿರಲು ಸಾಧ್ಯ ಎನ್ನುವುದನ್ನು ತಿಳಿಯಬಹುದು. ಇದಕ್ಕೆ ಪೂರಕವಾಗಿ ನಾಯಕನಹಟ್ಟಿ ಬಳಿಯಿರುವ ದೇವರಹಳ್ಳಿಯ ಕಿನ್ನರಿ ಜೋಗಿಗಳು ಪ್ರತಿವರ್ಷ ಜಾತ್ರೆಯ ಸಮಯದಲ್ಲಿ ಬಂದು ಕಪ್ಪಕಾಣಿಕೆ ಕೊಡುವ ಸಂಪ್ರದಾಯವನ್ನು ಕಾಣಬಹುದು. ಹಾಗೂ ನುಂಕೇಮಲೆಯ ಬೆಟ್ಟಗಳಲ್ಲಿ ಒಂದು ಬೆಟ್ಟವನ್ನು ಜೋಗಪ್ಪನ ಗುಡ್ಡ ಎಂತಲೂ ಕರೆಯುವ ವಾಡಿಕೆಯಿದೆ.

ಮೌಖಿಕ ಚರಿತ್ರೆಯನ್ನು ಅವಲೋಕಿಸಿದರೆ ಈ 'ಜೋಗಿ' ಪರಿಕಲ್ಪನೆ ಬೇರೆಯದೇ ಆಯಾಮ ಪಡೆದುಕೊಳ್ಳುತ್ತದೆ.

ಜನಪದರು ಹೇಳುವ ಕಥೆಯ ಪ್ರಕಾರ ಈ ಮಾರ್ಗದ ಬೆಟ್ಟದಲ್ಲಿ "ರಸಸಿದ್ಧ" ಎಂಬ ರಾಕ್ಷಸನು ವಾಸವಾಗಿದ್ದನು. ಅವನನ್ನು ಸಂಹರಿಸಬೇಕಾದರೆ ಅವನ ಕೊಪ್ಪರಿಗೆ ವಿಷವನ್ನು ಖಾಲಿಮಾಡಬೇಕಿತ್ತು. ಇದನ್ನರಿತ ಕಾಲಭೈರವನು ತನ್ನ ವೇಶವನ್ನು ಬದಲಿಸಿ ಜೋಗಿ ವೇಷದಲ್ಲಿ ಸುಂಕವ್ವ ಮಲಿಯವ್ವರ ಬಳಿ ವಿಷವನ್ನು ಭಿಕ್ಷೆ ಬೇಡಿದ. ಆಗ ಭಿಕ್ಷೆಯ ರೂಪದಲ್ಲಿ ರಸವನ್ನೆಲ್ಲಾ ಖಾಲಿಮಾಡಿದ. ಆಗ ರಸಾಸಿದ್ಧನನ್ನು ಸಂಹರಿಸಿದ ಕಥೆಯಿಂದ ಜೋಗಿ ಎನ್ನುವುದು ಕಾಲ ಭೈರವನ ಒಂದು ವೇಷ ಅಥವಾ ಪವಾಡವಾಗಿರಲು ಸಾಧ್ಯವಿದೆ. ಈ ಸಾಧ್ಯತೆಯಿಂದಾಗಿಯೇ ಕಾಲಭೈರವನೇ ಇಲ್ಲಿ ಜೋಗಿಯಾಗಿ ಬಳಕೆಯಾಗುತ್ತಿರುವುದನ್ನು ಗುರುತಿಸಬಹುದು.

ಈ ಹಿನ್ನೆಲೆಯಲ್ಲಿ ಯೋಚಿಸುವುದಾದರೆ ಜೋಗಿ ಎನ್ನುವ ಪದವೇ ಇಲ್ಲಿ 'ನಾಥ' ಪಂಥದವರು ನೆಲಿಸಲು ಕಾರಣವಾಗಿರಬಹುದೆಂದು ಊಹಿಸಬಹುದು. ಏಕೆಂದರೆ 'ಜೋಗಿ' ಯ ವೇಷದ ಒಂದು ರೂಪ ಕಾಲಭೈರವ ಪವಾಡಗಳಲ್ಲಿ ಮಹಾತ್ವವಾದುದರಿಂದ 'ಜೋಗಿ' ಯದೇ ಒಂದು 'ಮಠ' ಸ್ಥಾಪನೆಯಾಗಿದೆ. ವಿಪರ್ಯಾಸವೆಂದರೆ ಜೋಗಿಯೇ ಬೇರೆ, ಕಾಲಭೈರವನೇ ಬೇರೆ ಎನ್ನುವ ನೆಲೆಯಲ್ಲಿ ಇಂದಿಗೂ ಭಕ್ತಾದಿಗಳಲ್ಲಿ ಒಡಕುಂಟಾಗಿರುವುದು. ಮೂಲದಲ್ಲಿ ಜೋಗಿ ಮತ್ತು ಕಾಲ ಭೈರವ ಒಂದೇ ಎಂದು ಹೇಳಬಹುದು.

ಈ ಮೇಲಿನ ಎಲ್ಲಾ ವಿವರಣೆಯನ್ನು ಅವಲೋಕಿಸಿದರೆ ಕೆಲವು ಮಹತ್ವದ ಹೊಳಹುಗಳು ದೊರೆಯುತ್ತವೆ. 'ಲುಂಕೆ' 'ಲುಂಕಪ್ಪ' ಎನ್ನುವುದು ರಸಸಿದ್ಧನ ದಾಸಿಯರಲ್ಲಿ ಒಬ್ಬಳಾದ ಸುಂಕವ್ವನ ಪದದ 'ಸ' ಕಾರವು ಜನರ ಬಾಯಿಯಲ್ಲಿ ಕಾಲ ಕ್ರಮೇಣ 'ಲ' ಕಾರವಾಗಿರಲು ಸಾಧ್ಯವಿದೆ. ಹಾಗಾಗಿ 'ಸುಂಕವ್ವ' 'ಲುಂಕವ್ವ'ನಾಗಿ 'ಸುಂಕೇಮಲೆ 'ಸಿದ್ದೇಶ್ವರ' ಲುಂಕೇ ಮಲೆಸಿದ್ದೇಶ್ವರನಾಗಿ ಅದು ಸಂಕ್ಷಿಪ್ತರೂಪದಲ್ಲಿ 'ಲುಂಕಪ್ಪ' ನಾಗಿರಬಹುದೆಂದು ಹೇಳಬಹುದು. ಹಾಗೆಯೇ ಈ ವರೆಗೂ ಯೋಗಿಗಳು ಧ್ಯಾನಮಾಡುವ ಸ್ಥಳವಾಗಿದ್ದರಿಂದ 'ಜೋಗಿ' ಎನ್ನುವ ಪದ ಬಂದಿರಬಹುದೆನ್ನುವ ಈ ವರೆಗಿನ ತರ್ಕವನ್ನು ನೋಡುವುದಾದರೆ ಕಾಲಭೈರವನ ಒಂದು ವೇಶವಾದ ಜೋಗಿ ವೇಷದಿಂದ 'ಜೋಗಿ' ಪದ ಬಂದಿದೆ ಎನ್ನುವ ನಿಲುವಿಗೆ ಬರಬಹುದು. ಪ್ರಸ್ತುತ ದಿನಗಳಲ್ಲಿಯೂ ಮೊಳಕಾಲ್ಮೂರು ಪರಿಸರದಲ್ಲಿ ಸುಂಕೇಮಲೆ ಸಿದ್ದೇಶ್ವರನ ಭಕ್ತರು ಭಕ್ತಿ ಪೂರ್ವಕವಾಗಿ ನಡೆದುಕೊಳ್ಳುತ್ತಾರೆ. ಈ ಅಂಶವನ್ನು ಭಕ್ತರು ಸುಂಕೇಮಲೆ ಬೆಟ್ಟವನ್ನು ಪ್ರೀತಿಯಿಂದ 'ಶ್ರೀ ಪರ್ವತ' 'ದೇವರ ಗುಡ್ಡ' ಎಂದು ಕರೆಯುವ ಪರಂಪರೆಯನ್ನು ಕಾಣಬಹುದಾಗಿದೆ.

## ೨.೩ : ಕ್ಷೇತ್ರದ ಸ್ಥಾಪನೆ ಮತ್ತು ಶಾಸನ ಚರಿತ್ರೆ

ಚಾರಿತ್ರಿಕವಾಗಿ ನೋಡುವುದಾದರೆ ಐದನೆಯ ಶತಮಾನದಲ್ಲಿ ಕದಂಬ ವಂಶದ ಅಜುವರ್ಮನೆಂಬ ರಾಜನು ಲುಂಕೇ ಎಂಬ ಕೋಟೆಯನ್ನು ಕಟ್ಟಿಸಿ ಲುಂಕಪ್ಪನನ್ನು ಪ್ರತಿಷ್ಠಾಪಿಸಿದನೆಂದೂ ತಿಳಿದುಬರುತ್ತದೆ. ಆದರೆ ಕದಂಬರು ಈ ಪ್ರದೇಶಕ್ಕೆ ಬರುವುದಕ್ಕೆ ಮುಂಚೆಯೇ ಸುಂಕಪ್ಪ, ಸುಂಕೆ ಎಂಬ ಪದಗಳು ಜನಪದರ ಮೌಖಿಕ ಪರಂಪರೆಯಲ್ಲಿ ಕಂಡುಬರುತ್ತವೆ. ಆದರೆ ನಂತರ ಬಂದ ಕದಂಬರು ಸುಂಕಪ್ಪನನ್ನು ಲುಂಕಪ್ಪ ಲುಂಕೇಶ ಎಂದು ಕರೆದಿರಬಹುದು. ಲಂಕ - ಲೆಂಕ - ಎಂಬ ಶಬ್ದಗಳು 'ಲುಂಕೆ' ಎಂಬ ಈ ಕ್ಷೇತ್ರದ ಮೂರು ನಾಮಕ್ಕೆ ಹತ್ತಿರ ಶಬ್ದಗಳಾಗಿವೆ. ಕವಿಗಳಿಗೆ ಕೆಲವು ಸಂದರ್ಭದಲ್ಲಿ ರ. ಳ. ಲ. ಗಳು ವಿನಿಮಯಾಕ್ಷರಗಳಾಗಿಬಹುದು ಹಾಗೂ ಇಲ್ಲಿನ ಯೋಗಿಗಳ ಮತವೂ ತಿರುಕರೂ ಆದ ಕಿನ್ನರಿ ಜೋಗಿಗಳಿಗೆ ಉಪಜೀವನ ಮಾರ್ಗದ ಊರುಗೋಲಾಗಿಯೂ ಇದೆ. ಆದ್ದರಿಂದ ಲಂಕ - ಲೆಂಕ - ಲೊಂಕೆ ಎಂಬ ಪದಗಳು ತಿರುಕನೆಂಬ ಅರ್ಥ ಕೊಡುತ್ತವೆ , ನಂತರ ಲುಂಕೆ ಎಂಬ ಪದವು ಸುಂಕೆ ಯಾಗಿ ಮೌಖಿಕ ಚಲನೆ ಶೀಲತೆಯನ್ನು ಹೊಂದಿರಬಹುದು.

ಕದಂಬರ ರಾಜರ ವಂಶ ವೃಕ್ಷ ಈ ರೀತಿಯಾಗಿದೆ.

## " ಕದಂಬ ಮಹಾರಾಜರ ವಂಶ ವೃಕ್ಷ "



(ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ೧೯-೦೫-೭೧ ರಲ್ಲಿ ಪ್ರಕಟವಾಗಿರುವ ಪ್ರಕಾರ ಹೊಸ ಶಾಸನವೊಂದು ಶಿರಾಳಕೊಪ್ಪ ತಾಲ್ಲೂಕಿನ ಗುಡ್ನಾಪುರದಲ್ಲಿ ಸಿಕ್ಕಿದೆ. ಇದರಲ್ಲಿ ಕದಂಬ ವಂಶದ ಹೊಸ ವಿವರಗಳು ಉಲ್ಲೇಖವಾಗಿವೆ.)

ಶ್ರೀ ಸುಂಕೇಶನನ್ನು ಪ್ರತಿಷ್ಠಾಪಿಸಿದ ಕದಂಬರ ರಾಜ ಅಜವರ್ಮನ ೨ ಶಾಸನಗಳನ್ನು ಹಾಗೂ ಬೆಂಚರಸದೇವರ ೧ ಶಾಸನವನ್ನೂ ಬಿಟ್ಟು ಮೂರು ಶಾಸನಗಳನ್ನು ಈ ಕ್ಷೇತ್ರದ ಮಲ್ಲಿಕಾರ್ಜುನ ದೇವಾಲಯ ಹಿಂಬದಿಯಲ್ಲಿ ಹುಟ್ಟು ಬಂಡೆಯ ಮೇಲೆ ಕೆತ್ತಿರುವುದನ್ನು ಕಾಣಬಹುದು. ಅವುಗಳು ಹೀಗಿವೆ :

**೧. ಒಂದನೆಯದಾಗಿ : ಅಜವರ್ಮನ ಶಾಸನ (ಕ್ರಿ.ಶ. ೮-೮-೯೮೨) ಗುರುವಾರ :**

"ಸ್ವಸ್ತಿ ಸಕನೃಪ ಕಾಲಾತೀತ ಸಂವತ್ಸರ ಸತಂಗ ೯೧೦ ನೆಯ ಸರ್ವಜಿತ್ ಸಂವತ್ಸರದ ಭಾದ್ರಪದ ಮಾಸದ ಏಕಾದಶಿ ಬೃಹಸ್ಪತಿವಾರದಂದು ಶ್ರೀಮತ್ ಡೆಯಜವರ್ಮನ ರಾಜ್ಯದೋಳ್ ನಾಡ ಮಾಡಿದ ಧರ್ಮ ....ಪನ್ನೆರಡು.

**೨. ಎರಡನೆಯದಾಗಿ : ಅಜವರ್ಮನ ಶಾಸನ (ಕ್ರಿ.ಶ, ೧೨.೧.೯೮೬) ಬುಧವಾರ :**

ಸ್ವಸ್ತಿ ಸಕನೃಪ ಕಾಲಾತೀತ ಸಂವತ್ಸರ ಸತಂಗ ೯೧೦ ನೆಯ ಸರ್ವಜಿತ್ಸಂವರದ ಪುಷ್ಯಮಾಸದಮಾತಾಸ್ಯ ಗ್ರಹಣದಂದು ಶ್ರೀಮದ್‌ಅಜವರ್ಮರಸನುಂ, ಮಾಳ್ಕಿಯಬ್ಬರಸಿಯುಂ ತಮ್ಮ ರಜೆಯಕಪ್ಪಡೆಯರ ಕಾಲಂ ಕರ್ಚಿ ಧಾರಾಪೂರ್ವಕಂ ಮಾಡಿ ಬಿಟ್ಟ ವೃತ್ತಿ. ಎಪ್ಪತ್ತರ ಬಳಿಯ ಎಡೆಯೂರ ಗುಯ್ಯಲೊಂದು. ಆ ಗುಯ್ಯಲಿ ತನ್ನ ಪ್ರತಿಷ್ಠೆಮಾಡಿದ ಳುಂಕೇಶ್ವರ ದೇವರ್ಗಂ ದೇವರ್ಗಂ ಮಾಳಿ ಕಬ್ಬರಸಿ ತುಂಬರ ಬೆಳೆದ ಬೋಗಿನಲು ಎಡೆಯೂರ ಪೊಲದೋಳ್ ಬಿಟ್ಟ ಮತ್ತಪ್ಪನ್ನೆರಡು ಪನ್ನಾಯ ಕೊಳಗಳ್ದೆಯಂ ಬಿಟ್ಟಳ್. ಇಧರ್ಮದ ನಾವಿನೊಬ್ಬ ಪ್ರತಿಪಾಳಿಸಿ ದಂಗೆ ಗಂಗೆ ಬಾಣರಾಸಿ, ಪ್ರಯಾಗೆ, ಕುರುಕ್ಷೇತ್ರಮೆಂಬ ಪುಣ್ಯ ತೀರ್ಥಂಗಳೋಳ್ ಸಾಸಿರ ಬ್ರಾಹ್ಮಣರ್ಗೆ ಸಾಯಿರ ಕವಿಲೆಯಂ ಕೋಡುಂ, ಕೊಳಗಮಂ, ಪಂಚರತ್ನದಿಂ, ಬಟಿಯಿಸಿ ಯುಭಯಮುಖಿಗೊಟ್ಟ ಫಲಮಕ್ಕು ಇಧರ್ಮನಾವ ನಾನು ಅಳಿದಂಗಾ ಪುಣ್ಯ ತೀರ್ಥಂಗಳೋಳ್ ಸಾಸಿರ ವೇದಪಾರಗರಪ್ಪ ಬ್ರಾಹ್ಮಣರುಮಂ ಸಾಸಿರ ಕವಿಲೆಯುಮಂಕೊಂದ ಬ್ರಹ್ಮಾತಿ ನಾಗುರ್ ಎಂಬುದಾಗಿದೆ.

**೩. ಮೂರನೆಯದು : ಬೆಂಚರಸದೇವರ ರಾಜ ಶಾಸನವಾಗಿದೆ (ಕ್ರಿ.ಶ. ೧೦೮೬) :**

ಸ್ವಸ್ತಿ ಸಮಧಿಗ್ರ ಪಂಚಮಹಾಸಬ್ದ ಮಹಾಮಂಡಳೇಶ್ವರ ಬನವಾಸಿ ಪುರ ವರಾಧೀಶ್ವರನುಂ, ಅಂ........ದೇವ.........ಯಶ್ವಮೇಧಯಜ್ಞ..............ವೀಕ್ಷಣ ಕದನ ಪ್ರ............ ಪರಿ..........................
..............................................................................................................
..............................................................................................................
.................................................................................................ಮಂಡಲ
..............................................................................................................
ನವಮಂದಿ ಜನ ಕಲ್ಪತರು ಸೂರ್ಯ ಪ್ರಭಾವಳಿ ಖಂಟರಂಬಾ......................ಸರಣಾಗತ ವಜ್ರಪಂಜರ ನುಡಿದಂತೆ ಗಂಡ ಗಂಡಭೇರುಂಡ ಕಲಿಗಳಾಭರಣ ವೈರಿಸಂಹರಣ ಶ್ರೀಮತು ಉಂಕೇಶ್ವರ ದೇವರ ದಿವ್ಯಶ್ರೀ ಪಾದಾರಾಧಕ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನು ಮಹಾಮಂಡಳೇಶ್ವರ ಪರಮ ಮಾಹೇಶ್ವರರುಮಪ್ಪ ಬೆಂಚರ ದೇವಾರು

ತಿ ಭುವನಮಲ್ಲ ಪೆರ್ಮಾಡಿರಾಯದೇವರ ರಾಜ್ಯದ ೧೦ ನೆಯ ವಿಕ್ರಮ ಸಂವತ್ಸರದ ಕಾರ್ತಿಕಶು ॥೧ ಸೋಮವಾರ ಸೋಮಗ್ರಹಣದಂದು ಲುಂಕೆಯ ಕೋಟೆಯೊಳು ಸುಖದಿಂ ರಾಜ್ಯಗೆಯಿವುತ್ತಮಿರ್ದ ಶ್ರೀ ಲುಂಕೇಶ್ವರ ದೇವ ರಂಗಭೋಗ ನಿವೇದ್ಯ ಜೀರ್ಣೋದ್ಧಾರಕ್ಕೆಂದು ಆಸ್ಥಾನಪತಿ ಜ್ಞಾನಶಕ್ತಿ ಸರ್ವೇಶ್ವರ ಪಂಡಿತರ್ಗೆ ಸರ್ವನಮಸ್ಯವಾಗಿ ಧಾರಾಪೂರ್ವಕಂ ಮಾಡಿಬಿಟ್ಟ ದತ್ತಿ ಚಾಮುಗೌಂಡನ ಪಳ್ಳಿಯುಂ ಹೊಲಸೀಮೆ ಮೂಡ ಗೋವರ ಕುರುಕೆತೆಂಕ ಪಾದಕಲ್ಲು ಪಡುವ ದನತೊರೆಯ ಬೆನೆಯಗುಂಡು ಬಡಗ ಹುಣಿಸೆಗುಯ್ಯಲು ಕಡೆವೆಯ ಗುಯ್ಯಲುಂ ಇಂತೀ ಚತುಸ್ಸೀಮೆ ಹಳ್ಳಿಯಷ್ಟಭೋಗ ತೇಜ ಸ್ವಾಮ್ಯ ಸಹಿತ ಲುಂಕೆಯೆಪ್ಪತ್ತಳಲುಂ ಗ್ರಾಮದಲ್ಲುಗದ್ಯಾಣ ೧ ನಂದಾದೇವಿಗೆಗೆ ಊರಲು ಎಳ್ಳು ೫೧ ಬೀಡಿನ ಗಾಣದಲ ಗಾಣವಾಲಿ ಎಣ್ಣೆ ಅರವಾನ ೧ ಹಿರಿಯ ಕೆರೆಯ ಗದ್ದೆಯಲು ದೇವರ ನಿವೇದ್ಯತೆ ೫೩ ರ ಕಡಹೆ ಸಿವಟಿದಾಸಯ್ಯ ಲಲೆ ಆನೆಲ್ಲು ಕೊಳ ೧೨ ಬೀಡಿನ ಸಮಸ್ತಮುಂ ಮುರಿದಂಡಂಗಳುಂ ೧. ಗಾತ್ರಿಗರುಂ ನೆರೆದಿಟ್ಟುಯಿಹೊರಕೆ ಗಾಂಡಲ್ಲಿ ಮಾನ೧. ಕೊಟ್ಟದ ಮಾನ ೧. ಹೆರಿಂಗೆ ಎಲೆ ೧೦೩ ಹೊರಗೆ ೫೦, ಈ ಧರ್ಮಮಂ ಪ್ರತಿಪಾಳಿಸುವುದು ಪ್ರತಿ ಪಾಳಸದವರು ಗಂಗತೀರದಲ್ಲು ಕವಿಲೆಯಂ ಬ್ರಾಹ್ಮಣರುಮಂ ಕೊಂದ ಪಾಪಕನಕ್ಕು.

ಹೀಗೆ ಈ ಮೂರು ಶಾಸನಗಳು ಪೂರ್ವದ ಹಳಗನ್ನಡದಲ್ಲಿದ್ದು ಎರಡು ಮತ್ತು ಮೂರನೆಯ ಶಾಸನಗಳು ಸುಂಕೇಶ ದೇವರಿಗೆ ದಾನ ದತ್ತಗಳನ್ನು ನೀಡಿರುವ ವಿಷಯವನ್ನು ಒಳಗೊಂಡಿವೆ.

ಕದಂಬರ ರಾಜರು ಪೂರ್ವಕಾಲದಲ್ಲಿ ಈ ಕ್ಷೇತ್ರಕ್ಕೆ ಒಡೆಯರಾಗಿದ್ದರು ಎಂಬ ಚರಿತ್ರೆಯನ್ನು ''ಮೈಸೂರು ಗೆಜೆಟಿಯರ್ ವಾಲ್ಯೂಮ್'' ಈ ರೀತಿಯಾಗಿ ಹೇಳುತ್ತದೆ.

ಕೂಗುವ ಬಂಡೆ (ಜೋಗಪ್ಪನಗುಡ್ಡ) ಗೆ ವಾಯುವ್ಯ ದಿಕ್ಕಿಗೆ ''ಸುಂಕೇಭೈರವನಗುಡ್ಡ'' ಎಂಬುದೊಂದು ಗುಡ್ಡವಿದೆ. ಇದರಲ್ಲಿರುವ ರಮಣೀಯವಾದ ಒಂದು ಕಣಿವೆಗೆ ಉಭಯ ಪಾರ್ಶ್ವದಲ್ಲಿಯೂ ಹೊರಕ್ಕೆ ಹೋಗುವ ಮಾರ್ಗವೇ ದೃಗ್ಗೋಚರವಾಗುವುದಿಲ್ಲ. ಈಶಾನ್ಯ ಪ್ರದೇಶದಲ್ಲಿ ಅದೇ ಹೆಸರಿನಿಂದ ಪ್ರಖ್ಯಾತವಾದ ಪುರಾತನ ದೇವಸ್ಥಾನವೊಂದಿದೆ. ಇಲ್ಲಿನ ಕೈಂಕರ್ಯವನ್ನು ಬತ್ತರ ಹಿಂದೂಸ್ಥಾನದಿಂದ ಬಂದಿರುವ ಬಾವಾಜಿಗಳು ಪರಂಪರೆಯಾಗಿ ಮಾಡುತಲಿದ್ದಾರೆ. ಇಲ್ಲಿರುವ ಶಾಸನಗಳಿಂದ ಈ ದೇವರ ಹೆಸರು ಲುಂಕೇಶ್ವರನೆಂದೂ ಕದಂಬ ವಂಶೀಯನಾದ ರಾಜನೊಬ್ಬನು ೧೦ ನೆಯ ಶತಮಾನದಲ್ಲಿ ಇದನ್ನು ಪ್ರತಿಷ್ಠಿಸಿದನೆಂದೂ ತಿಳಿದು ಬರುತ್ತದೆ. ಕದಂಬರು ಈ ಪ್ರದೇಶದಲ್ಲೇ ಯೇ ಲುಂಕೆಯ ಕೋಟೆಯೆಂಬುದೊಂದು ದುರ್ಗವನ್ನು ಕಟ್ಟಿಕೊಂಡಿದ್ದರು. ಅಶೋಕನ ಶಾಸನಗಳನ್ನು ಬಿಟ್ಟರೆ ಈ ತಾಲ್ಲೂಕಿನಲ್ಲಿ ತೀರಾ ಹಳೆಯ 'ಶಾಸನಗಳೆಂದರೆ ಈ ಸುಂಕೇಭೈರವನ ಗುಡ್ಡದಲ್ಲಿರುವವುಗಳೇ' ಇವು ಕದಂಬ ಶಾಸನಗಳು.

ಮೊಳಕಾಲ್ಮೂರುವಿಗೆ ಉತ್ತರದಲ್ಲಿ ಹಿರೇ ಆರ್ಯರ ದುರ್ಗವೆಂದು ( ಈಗ ಇದನ್ನು ಹಿರಾರನ ಗುಡ್ಡವೆನ್ನು ವರೆಂದು ಈ ಮೊದಲೇ ಹೇಳಿದ್ದೇವೆ) ಪ್ರಸಿದ್ಧವಾದ ಉಚ್ಚಂಗಿದುರ್ಗವು ಕದಂಬ ರಾಜಧಾನಿಗಳಲ್ಲೊಂದಾದ ಉಚ್ಚಶೃಂಗಿಯಾಗಿರಬಹುದು. ಸುಂಕೇ ಭೈರವ ಗುಡ್ಡವು ಸಮುದ್ರದ ಮಟ್ಟಕ್ಕೆ ೩೦೨೨ ಅಡಿಗಳು ಎತ್ತರವಾಗಿದೆ. (ಮೈಸೂರು ಗೆಜೆಟಿಯರ್ ವಾಲ್ಯುಮ್ - ೨ : ೫೩೫)

## ೨.೪. ಆಸ್ತಿ ಮತ್ತು ಆಡಳಿತ

ನಾಥ ಪಂಥವು ನೆಲೆಸಿದ ನಂತರ ಕ್ಷೇತ್ರದ ಆಸ್ತಿ ಪಾಸ್ತಿಗಳಿಗೆಲ್ಲಾ ತಾನೇ ಒಡೆಯನಂತೆ ಆಡಳಿತ ಮತ್ತು ಕ್ಷೇತ್ರಾಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿ ಗೊಂಡಿತು. ಶ್ರೀಕ್ಷೇತ್ರವು ೮೦ ಹೆಕ್ಟೇರ್ ಭೂಮಿಯ ವಿಸ್ತೀರ್ಣ ಹೊಂದಿದ್ದು ೪೦ ಹೆಕ್ಟೇರ್ ಸುಂಕೇಮುಲಿ ಭೈರವನ ಹೆಸರಿಗೂ, ೪೦ ಹೆಕ್ಟೇರ್ ಗೋರಕ್ಷಕ ನಾಥ ದೇವರ ಹೆಸರುಗಳ ಖಾತೆಯಲ್ಲಿದೆ.

ಪೂಜಾಡಳಿತ ಜವಾಬ್ದಾರಿಯೆಲ್ಲಾ ಪೂಜಾರು ಗುಡ್ಡದ ಸಿದ್ದಣ್ಣ ಹಾಗೂ ಮಲ್ಲಣ್ಣನವರು ವಹಿಸಿಕೊಂಡಿದ್ದಾರೆ. ಇವರನ್ನು ಬಿಟ್ಟರೆ ಜೋಗಿಯ ಮಠದಲ್ಲಿ ವಾಲ್ಮೀಕಿ ಜನಾಂಗದವರೂ ಹರಳಯ್ಯನ ದೇವಸ್ಥಾನದಲ್ಲಿ ಗೊರವರು (ಹರಿಜನರು) ಕಂಡುಬರುತ್ತಾರೆ. ಇಲ್ಲಿ ವಾಲ್ಮೀಕಿ ಮತ್ತು ಗೊರವರವು, ೧೦-೧೫ ಮನೆಗಳು ಕಂಡು ಬರುತ್ತವೆ. ವಾಲ್ಮೀಕಿ ಜನಾಂಗದವರನ್ನು ಕಾವಲುಗಾರರೆಂದು ಕರೆಯುತ್ತಾರೆ. ಇವರು ಧೈರ್ಯ ಸಾಹಸಗಳಿಗೆ ಪಾತ್ರರಾಗಿದ್ದು ಕ್ಷೇತ್ರದ ರಕ್ಷಕರಾಗಿದ್ದಾರೆ. ಸುಂಕಪ್ಪನ ಬೆಳ್ಳಿ - ಬಂಗಾರದ ಒಡವೆಗಳೆನ್ನೆಲ್ಲಾ ತಮ್ಮ ಹಿಡಿತದಲ್ಲಿಟ್ಟು ಕೊಂಡಿದ್ದಾರೆ. ಜಾತ್ರೆಯಲ್ಲಿ ಹರಳಯ್ಯನವರಿಗೂ, ಪಾಳೆಯಗಾರರಿಗೆ ವಿಶೇಷವಾದ ಮರ್ಯಾದೆಗಳು ಸಲ್ಲುತ್ತದೆ.

ನಂತರ ಕ್ಷೇತ್ರದ ಆದಾಯವನ್ನು ಗಳಿಸುತ್ತಾ ಅಭಿವೃದ್ಧಿ ಕಾರ್ಯಗಳನ್ನು ನಡೆಸುವವರು ನಾಥ ಪಂಥದವರು ಇಲ್ಲಿಗೆ ಅವರು ಒಬ್ಬ ಸ್ವಾಮಿಯನ್ನು ಸಹ ನೇಮಿಸುತ್ತಾರೆ. ಈಗ ರಾಜಗುರು ಮಂಗಲನಾಥಾಜಿಯವರು ೧೧೩ನೇ ಪಟ್ಟಾಧ್ಯಕ್ಷರಾಗಿದ್ದಾರೆ. ಇನ್ನು ೧೧೨ ಜನ ಸ್ವಾಮೀಜಿಗಳು ನೇಮಕಗೊಂಡು ಕೆಲವರು ಇಲ್ಲಿಯೇ ಐಕ್ಯವಾಗಿದ್ದಾರೆ. ಸ್ವಾಮಿಯನ್ನು ಪಟ್ಟ ಕಟ್ಟುವಾಗ ಸುತ್ತ ಮೂವತ್ಮೂರು ಹಳ್ಳಿ ಜನ ಒಟ್ಟಿಗೆ ಸೂಚಿಸಿದಾಗ ಮಾತ್ರ ಆತನಿಗೆ ಪಟ್ಟಾಭಿಷೇಕ ವಾಗುತ್ತದೆ. ಈ ಸ್ವಾಮಿಯು ನಾಥಪಂಥದವರ ಮೂಲಕ ಅನೇಕ ಕಾಮಗಾರಿಗಳನ್ನು ಆರಂಭಿಸಿದ್ದಾರೆ. ಒಂದು ಗೋಶಾಲೆಯನ್ನು ನಿರ್ಮಿಸಿ ಇನ್ನು ಕೆಲವು ಜೀರ್ಣೋದ್ಧಾರ ಕಾರ್ಯಗಳನ್ನು ಕೈಗೆತ್ತಿಕೊಂಡಿದ್ದಾರೆ. ಸರ್ವೋದಯ ಶಾಲೆಯನ್ನು ಸಹ ಪ್ರಾರಂಭಿಸಲು ಮುಂದಾಗಿದ್ದಾರೆ.

ರಾಜಸ್ಥಾನದವರು ಈ ಕ್ಷೇತ್ರಕ್ಕೆ ಪ್ರೋತ್ಸಾಹ ಧನವನ್ನು ನೀಡುತ್ತಾರೆ. ಒಟ್ಟಿನಲ್ಲಿ ಆಡಳಿತವೆಲ್ಲಾ ನಾಥ ಪಂಥದವರದ್ದಾಗಿರುತ್ತದೆ.

ಈ ಕ್ಷೇತ್ರದಲ್ಲಿ ಸಾಕಷ್ಟು ಮರ ಗಿಡಗಳಿದ್ದು ಇವುಗಳ ರಕ್ಷಣೆಗಾಗಿ ಸುತ್ತ ಮೂವತ್ಮೂರು ಹಳ್ಳಿಗಳು ಸೇರಿ ಈಚೆಗೆ ೨೦೦೧ ರಲ್ಲಿ ಗ್ರಾಮಾರಣ್ಯಸಮಿತಿಗಳನ್ನು ರಚಿಸಿ ಕೊಂಡಿದ್ದಾರೆ. ಸರ್ಕಾರವು ಈ ಬೆಟ್ಟದಲ್ಲಿರುವ ಕಾಡನ್ನು ೧೦ ಭಾಗ ಮಾಡಿ ೧೦ ಹಳ್ಳಿಗಳ ಜವಾಬ್ದಾರಿಗೆ ಕೊಟ್ಟು ೧೦ ಗ್ರಾಮಾರಣ್ಯ ಸಮಿತಿಗಳನ್ನು ರಚಿಸಿ ಕೊಟ್ಟಿದೆ. ಪೂಜಾರಿಪಟ್ಟಿಯಲ್ಲಿ ಮಲ್ಲಿಕಾರ್ಜುನ ಗ್ರಾಮಾರಣ್ಯ ಸಮಿತಿಯನ್ನು ಸ್ಥಾಪಿಸಿ ಮಲ್ಲಣ್ಣ ಎಂಬುವರು ಸಮಿತಿಯ ಅಧ್ಯಕ್ಷರಾಗಿದ್ದಾರೆ. ಇದರಲ್ಲಿ ಬಂದ ಆದಾಯವನ್ನು ಶೇಕಡ ೧೦ ರಷ್ಟು ಸರ್ಕಾರಕ್ಕೆ ಕಟ್ಟಿ ಉಳಿದ ೯೦% ಸಮಿತಿಗಳಿಗೆ ಸೇರುತ್ತದೆ. ಸಮಿತಿಗಳಿಗೆ ಬಂದ ಆದಾಯವನ್ನು ಗ್ರಾಮಾಭಿವೃದ್ಧಿ ಕಾರ್ಯಗಳಿಗೆ ಉಪಯೋಗಿಸುತ್ತಾರೆ.

ಈ ಕ್ಷೇತ್ರದ ವ್ಯಾಪ್ತಿಗೆ ಒಳಪಟ್ಟ ಸುತ್ತ ಮುತ್ತಲಿರುವ ಮೂವತ್ತೂರು ಹಳ್ಳಿಗಳು ಸಹ ಭೈರವನ ಕ್ಷೇತ್ರಕ್ಕೆ ಸದಸ್ಯತ್ವವನ್ನು ಪಡೆದಿರುತ್ತದೆ. ಜಾತ್ರೆಯ ವಿಷಯದಲ್ಲಾಗಲೀ ಹಾಗೂ ಕ್ಷೇತ್ರದ ಅಭಿವೃದ್ಧಿಯ ಕಾರ್ಯಗಳಾಗಲೀ ಯಾವುದೇ ಶುಭಕಾರ್ಯಗಳಲ್ಲಿಯೂ ಸಹ ೩೩ ಹಳ್ಳಿಗಳ ಗ್ರಾಮಸ್ಥರನ್ನು ಒಂದೆಡೆ ಸೇರಿಸಿ ಚರ್ಚಿಸಿ ಒಂದು ನಿರ್ಧಾರಕ್ಕೆ ಬಂದು ಒಮ್ಮತ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕಾಗುತ್ತದೆ.

ಈ ೩೩. ಹಳ್ಳಿಗಳು ಈ ಕೆಳಕಂಡಂತಿವೆ.

೧. ಮೊಳಕಾಲ್ಮೂರು
೨. ಗೊಲ್ಲರ ಹಟ್ಟಿ
೩. ಮಾರ್ಲಹಳ್ಳಿ
೪. ಕನಕಯ್ಯನ ಹಟ್ಟಿ
೫. ಗಿರಿಯಜ್ಜನ ಹಟ್ಟಿ
೬. ತಿಪ್ಪೀರಯ್ಯನ ಹಟ್ಟಿ
೭. ಎದ್ದುಲು ಬೋರಯ್ಯನಹಟ್ಟಿ
೮. ಗುಂಡ್ಲೂರು
೯. ಸೋಮೇನಹಳ್ಳಿ
೧೦ ರಾಯಾಪುರ
೧೧. ದೇವರಹಟ್ಟಿ
೧೨. ಯರ್ರಯ್ಯನಹಳ್ಳಿ
೧೩. ಸೂಲೇನಹಳ್ಳಿ
೧೪. ಸಿದ್ದಯ್ಯನಕೋಟೆ
೧೫. ತುಮಕೂರ್ಲಹಳ್ಳಿ
೧೬. ನುಂಕನಹಳ್ಳಿ
೧೭. ಗುಡ್ಡದ ಬೋರಯ್ಯನ ಹಟ್ಟಿ
೧೮. ಹಾನಗಲ್ಲು
೧೯. ಕೋಮುನ ಪಟ್ಟಿ
೨೦. ಹಳೇಕೆರೆ
೨೧. ಪೂಜಾರಹಟ್ಟಿ
೨೨. ಏರ್ಜನಹಳ್ಳಿ
೨೩. ಬೊಮ್ಮಲಿಂಗನಹಳ್ಳಿ
೨೪. ತಳವಾರ ಹಳ್ಳಿ
೨೫. ಹಿರೇಕೆರೆಹಳ್ಳಿ
೨೬. ಮೇಗಳ ಹಟ್ಟಿ
೨೭. ಕೆಳಗಳ ಹಟ್ಟಿ
೨೮. ಕಂಟನಾಯಕನ ಹಳ್ಳಿ
೨೯. ಗುಡ್ಡದ ಹಳ್ಳಿ
೩೦. ಭೈರಾಪುರ
೩೧. ನಾಗಸಮುದ್ರ
೩೨. ಉಚ್ಚಂಗಿ ದುರ್ಗ
೩೩. ಮಠದ ಜೋಗಿಹಳ್ಳಿ

# ನಾಥ ಪಂಥ ಮತ್ತು ನುಂಕೇಮಲೆ ಭೈರವನ ಚರಿತ್ರೆ

ಬೌದ್ಧ ಸಿದ್ಧರಾದ ವಜ್ರಯಾನ ಪಂಥಿಗಳು ಮಾಟ ಮಂತ್ರಗಳಲ್ಲಿ ತೊಡಗಿಕೊಂಡು ಗುಹ್ಯಸಾಧನೆಗಳಲ್ಲಿ ತೊಡಗಿದಾಗ ಜನ ದಿಗ್ಭ್ರಾಂತರಾಗಿ ಗೊಂದಲಕ್ಕೀಡಾದರು. ಅಂತಹ ಸಂದರ್ಭದಲ್ಲಿ ಧರ್ಮವನ್ನು ಗೊಂದಲದಿಂದ ಮೇಲೆತ್ತಲು ಶುದ್ಧಿಗೊಳಿಸಲು ಒಂದು ಹೊಸ ಪಂಥ ಹುಟ್ಟಿಕೊಂಡಿತು ಅದೇ ನಾಥ ಸಂಪ್ರದಾಯವಾಯಿತು.

'ನಾಥ' ಎಂಬ ಶಬ್ದ ರಕ್ಷಕ ಇಲ್ಲವೇ ಆಶ್ರಯಧಾತ ಎಂಬ ಅರ್ಥದಲ್ಲಿ ಅಥರ್ವಣವೇದ ಹಾಗೂ ತೈತ್ತರೀಯ ಬ್ರಾಹ್ಮಣದಲ್ಲಿ ದೊರೆಯುತ್ತದೆ. ಮಹಾಭಾರತದಲ್ಲಿ ಒಡೆಯ ಇಲ್ಲವೇ ಪತಿ ಎಂಬ ಅರ್ಥದಲ್ಲಿ ಇದು ಬಳಕೆಯಾಗಿದೆ. ಜೈನರು ಮತ್ತು ವೈಷ್ಣವರಲ್ಲಿ ಕೂಡ ಈ ಶಬ್ದ ಅತ್ಯಂತ ದೊಡ್ಡ ದೇವರು ಎಂಬ ಅರ್ಥದಲ್ಲಿ ಬಳಕೆಯಾಗಿದೆ.

ಪರವರ್ತೀ ಕಾಲದಲ್ಲಿ ಯೋಗಪರವಾದ ಪಾಶುಪತ ಶೈವ ಮತವೇ ನಾಥ ಸಂಪ್ರದಾಯವಾಗಿ ರೂಪುಗೊಂಡಿತು. ಆಗ 'ನಾಥ' ಎಂಬ ಶಬ್ದ ಶಿವ ಎಂಬ ಅರ್ಥದಲ್ಲಿ ಪ್ರಚಲಿತವಾಯಿತು. 'ನಾ' ಎಂದರೆ ಅನಾದಿರೂಪ 'ಥ' ಎಂದರೆ ಮೂರು ಲೋಕಗಳ ಸ್ಥಿತಿಗೆ ಕಾರಣ. ಅನಾದಿ ಪರಶಿವ ವಸ್ತುವಿಗೆ ನಾಥ ಎಂಬುದು ಪರ್ಯಾಯ ನಾಮ. ನಾಥ ಸಂಪ್ರದಾಯದ ಕಟ್ಟಡವು ಹಠಯೋಗದ ತಳಹದಿಯ ಮೇಲೆ ನಿಂತಿದೆ. ನಾಥ ಪರಂಪರೆಯ ಸಿದ್ಧರೆಲ್ಲರೂ ಉಗ್ರವಾದ ಇಂದ್ರಿಯ ನಿಗ್ರಹದಿಂದ ಅದ್ಭುತವಾದ 'ಭೌತಿಕ ವಿಜಯವನ್ನು ಸಂಪಾದಿಸಿದ ಸಿದ್ಧರೇ ಆಗಿದ್ದಾರೆ. 'ಸಿದ್ಧ' ಎಂಬುದು ಜ್ಞಾನ ತಿಳುವಳಿಕೆ ಸಂಪಾದಿಸುವುದನ್ನು ಸೂಚಿಸುತ್ತದೆ. 'ಇದೊಂದು ವಿಜ್ಞಾನವಿದ್ದಂತೆ. ವ್ಯಕ್ತಿಯು ಪ್ರಾಯೋಗಿಕವಾಗಿ ತನ್ನನ್ನು ತಾನು ಕಳೆದುಕೊಂಡು ಪರಿಶುದ್ಧ ಆತ್ಮವನ್ನು ಸೃಷ್ಟಿಸಿಕೊಳ್ಳುವಂತದ್ದು ಅಥವಾ ಸಿದ್ಧಿ ಪಡೆಯುವ ಮಾನವ ಸ್ವಯಂ ಶಕ್ತಿಯಿಂದ ಸಾಮಾನ್ಯರ ನಡುವೆ ಭಿನ್ನವಾಗಿ ಅಸಾಮಾನ್ಯವಾದ ಅದ್ಭುತಗಳನ್ನೂ ಪವಾಡಗಳನ್ನೂ ಮೆರೆಯುತ್ತಾ ಶ್ರೇಷ್ಠರಾಗಿ ಪವಾಡ ಪುರುಷರಾಗಿ ದೇವರು ಎನಿಸುತ್ತಾರೆ. ಸಿದ್ಧ ಪರಂಪರೆಯ ನಾಯಕರೆಲ್ಲರೂ ಹೀಗೆ ಪರಿಗಣಿಸಲ್ಪಟ್ಟವರು.

ಇವರು ಮುಖ್ಯವಾಗಿ ಯೋಗಭ್ಯಾಸ, ಏಕಾಂತವಾಸ, ಭಂಗಿ ಸೇವನೆ, ಕಾಯಸಿದ್ಧಿ ಅಥವಾ ಹಠಯೋಗ ಹಾಗೂ ಅಷ್ಟ ಸಿದ್ಧಿ ಇವರ ಸಾಧನೆಗಾಗಿ ಮಾಡುವ ವಿಧಾನಗಳಾಗಿವೆ. ಈ ನಾಥಸಿದ್ಧರು ಮಾಡುವ ಪವಾಡಗಳು ಮತ್ತು ಆ ಸಂಬಂಧಿ ಮತಗಳು ಕಟ್ಟುಕತೆಗಳಂತೆ ಕಂಡರೂ ಪವಾಡಗಳನ್ನು ಜಯಿಸಲು ಇವರು ಪಡೆದಿರುವ ಸಿದ್ಧಿ ಮಾನಸಿಕ ತಯಾರಿ ಅವರು ಅನುಸರಿಸಿದ ಮಾರ್ಗ ತಂತ್ರ ವಿದ್ಯೆ. ಹಠಯೋಗ, ಪ್ರಯೋಗ, ಇವುಗಳನ್ನು ಗಮನಿಸಿದರೆ ಪವಾಡಗಳನ್ನು ಗೆದ್ದಿರುವ ಘಟನೆಯಲ್ಲಿ ಸತ್ಯಾಂಶವಿರುವ ಸಾಧ್ಯತೆಗಳಿವೆ. ಇವರು ವಜ್ರೋಳಿ ಸಿದ್ಧಿ ಗುಪ್ತವಿದ್ಯೆ ಜನಪದ ವೈದ್ಯಶಕ್ತಿಯನ್ನು ತಿಳಿದವರಾಗಿದ್ದಾರೆ.

ಇವರು ನಿರ್ಮಿಸಿಕೊಂಡಿದ್ದ ಅಗೋಚರವಾದ ಜಲಬಾವಿ, ಪಾತಾಳಬಾವಿ, ನೆಲಮಾಳಿಗೆ, ಬೆಟ್ಟಗುಡ್ಡಗಳು, ಗುಹೆಗಳೆಂಬ ಸಾಂಕೇತಿಕ ಗುಪ್ತಸ್ಥಳಗಳಲ್ಲಿ ನಿಗೂಢ ರೀತಿಯಲ್ಲಿ ಐಕ್ಯವಾಗಿದ್ದಾರೆ. ಅವರು ಏನಾದರು ಎಂಬುದು ಸಮುದಾಯಕ್ಕೆ ಇನ್ನೂ ನಿಗೂಢ. ಸಿದ್ಧರು ಸಂತರು ಅನುಭಾವಿಗಳೆಲ್ಲರ ಅಂತ್ಯ ಹೀಗೆಯೇ ಆಗಿರುವುದುಂಟು. ಇವರು ಯೋಗ ಸಾಧನೆ ಮಾಡಿ ರೋಗ ನಿವಾರಕ ಶಕ್ತಿಯನ್ನು ಹೊಂದಿ ಬಹುಕಾಲ ಬದುಕುತ್ತಿದ್ದರು.

ಬೌದ್ಧಸಿದ್ಧ ಮತ್ತು ಶೈವಸಿದ್ಧ ಸಾಧನೆಗಳ ಮಿಶ್ರಣ ರೂಪವೇ ನಾಥಸಿದ್ಧರದಾಗಿದೆ. ಬೌದ್ಧ ಸಿದ್ಧರೆಂದರೆ ಬೌಧ ಧರ್ಮದ ತಾಂತ್ರಿಕ ರೂಪವಾದ ವಜ್ರಯಾನ ಪಂಥವಾಗಿದೆ. ಈ ಪಂಥಕ್ಕೆ ಗೋರಕ್ಷಕನಾಥನು ಶಿವದೀಕ್ಷೆಯನ್ನು ಕೊಟ್ಟು ನಾಥಪಂಥವಾಗಿಸಿದನು. 'ಈ ಪರಿವರ್ತನೆಯು ಭಾರತದ ತುಂಬೆಲ್ಲಾ ನಡೆದಂತೆ ಕಾಣುತ್ತದೆ.

ಮೊದಲು ವಜ್ರಯಾನಿ ಬೌದ್ಧರ ತಾಣವಾಗಿದ್ದ ಮಂಗಳೂರಿನ ಕದರೀ ಬೆಟ್ಟವು ಅನಂತರ ನಾಥಕೇಂದ್ರವಾಯ್ತು. ಆದ್ದರಿಂದ ನಾಥಪಂಥವು ಬೌದ್ಧ ವಜ್ರಯಾನ ಹಾಗೂ ಶೈವಸಿದ್ಧ ಪಂಥಗಳ ಸಂಕರ ರೂಪ. ಈ ಸಂಕರ ಬಂಗಾಳ ರಾಜಸ್ಥಾನಗಳಲ್ಲಿಯೂ ನಡೆಯಿತು.

ಬೌದ್ಧರಲ್ಲಿ ಹೀನಯಾನ, ಮಹಾಯಾನ ಪಂಥಗಳು ಎಂದು ಎರಡು ಪಂಗಡಗಳಿದ್ದು ಮಹಾಯಾನ ಪಂಥದ ಮೂಲ ಪುರುಷನೆನಿಸಿಕೊಳ್ಳುವ ನಾಗರ್ಜುನನು ಸಿದ್ಧ ಸಂಪ್ರದಾಯದ ಪ್ರವರ್ತನೂ ಅಹುದು. ಮುಂದೆ ಸಿದ್ಧ ಸಂಪ್ರದಾಯ ವಜ್ರಮಾನ ಪಂಥವಾಗಿ ಪರಿಣಮಿಸಿತು. ಇವರಲ್ಲಿ ೮೪ ಸಿದ್ಧರು ಪ್ರಸಿದ್ಧರು. ಆದಿನಾಥ ಮಚ್ಚೆಂದ್ರನಾಥ, ಗೋರಖನಾಥ ಎಂದು ಕ್ರಮವಾಗಿ ನಾಥ ಸಿದ್ಧ ಪರಂಪರೆ ಪ್ರಾರಂಭವಾಗುತ್ತದೆ. ಇವರು ಹೆಚ್ಚಿನದಾಗಿ ಪರ್ವತ ವಾಸಿಗಳು. ತಪಸ್ಸಾಧನೆಯಿಂದ ಸಿದ್ಧಿಯನ್ನು ಪಡೆದು ಮೋಕ್ಷ ಪಡೆಯುತ್ತಾರೆ. ರಸಾಯನದ ಮೂಲಕ ಸಿದ್ಧ ಪ್ರಾಪ್ತಿಯಲ್ಲಿ ನಂಬಿಕೆಯುಳ್ಳವರು ಪಾದರಸ (ಶಿವ) ಅಭ್ರಕ (ಶಕ್ತಿ) ಇವುಗಳ ಮಿಶ್ರಣದಿಂದ ಮೃತ್ಯು ಹಾಗೂ ದಾರಿದ್ರ್ಯನಾಶ ಜೀವನ್ಮುಕ್ತಿ ಹಾಗೂ ಅಜರಾಮತ್ವವನ್ನು ಸಾಧಿಸಿ ಸಿದ್ಧರಾದವರು. ಇವರನ್ನು ಬೌದ್ಧಸಿದ್ಧರು, ನಾಥ ಸಿದ್ಧರು, ಶೈವಸಿದ್ಧರು, ರಸಾಸಿದ್ಧರು, ಮಹೇಶ್ವರ ಸಿದ್ಧರು, ಕಪಾಲಿ ಸಿದ್ಧರು ಮೊದಲಾಗಿ ವಿಂಗಡಿಸಲಾಗಿದೆ.

ಗೋರಕ್ಷಕನಾಥನು ನಾಥಪಂಥದ ಪ್ರವರ್ತಸೋ ಅಥವಾ ಸಂಘಟಿಕನೋ ಎಂದು ಊಹೆ ಮಾಡಲಾಗಿದೆ. ಈತನು ಕರ್ನಾಟಕದವನೆಂದು ಕೆಲವರ ಅಭಿಪ್ರಾಯ. ಶಂಕರಾಚಾರ್ಯನ ತರುವಾಯ ಬಂದ ಒಬ್ಬ ಧಾರ್ಮಿಕ ಮುಖಂಡ. ಗೋರಕ್ಷನಾಥನಿಂದ ಪ್ರವರ್ತಿತವೆನ್ನಲಾದ ನಾಥ ಪಂಥ ೧೨ ಶಾಖೆಗಳಾಗಿ ಹಂಚಿ ಹೋಗಿದೆಂಬ ಅಭಿಪ್ರಾಯವಿದೆ. ಇವರಲ್ಲಿ ಗೊಂದಲವಿದ್ದು ಮುಖ್ಯವಾಗಿ ನವನಾಥರನ್ನು ಹೆಸರಿಸಬಹುದು. ಗೋರಕ್ಷನಾಥ, ಜಾಲಂಧರನಾಥ, ನಾಗಾರ್ಜುನ, ಸಹಸ್ರಾರ್ಜುನ, ದತ್ತಾತ್ರೇಯ, ಜಡಭರತ, ಆದಿನಾಥ ಮತ್ಸ್ಯೇಂದ್ರನಾಥ. ಸಿದ್ಧರು ಚಿರಂಜೀವಿಗಳೆಂದೂ ಕಾಲದಂಡವನ್ನು ಖಂಡ ತುಂಡು ಮಾಡಿ ಇಂದಿಗೂ ಬ್ರಹ್ಮಾಂಡದಲ್ಲಿ ವಿಹರಿಸುತ್ತಿರುವರೆಂದೂ ನಂಬುಗೆ.

ಶಾಸ್ತ್ರ ಗಂಥದಲ್ಲಿ ಹಠಯೋಗವೆಂದರೆ ಪ್ರಾಣ - ನಿರೋಧ ಸಾಧನೆ ಸಿದ್ದ - ಸಿದ್ಧಾಂತ ಪದ್ಧತಿಯಲ್ಲಿ 'ಹ' ಎಂದರೆ ಸೂರ್ಯನೆಂದೂ 'ಠ' ಎಂದರೆ ಚಂದ್ರನೆಂದೂ ಮತ್ತು ಇವುಗಳ ಯೋಗವೇ ಹಠಯೋಗವೆಂದು ಹೇಳಿದೆ. ಆದಿನಾಥ ಸ್ವತಃ ಶಿವನಾಥರಿಂದ ನಾಥಪಂಥವೂ ಕೂಡಾ ಮೂಲತಃ ಶೈವವೆಂದು ಕೆಲವರ ಅಭಿಪ್ರಾಯ. ಒಟ್ಟಿನಲ್ಲಿ ಹಲವಾರು ಧರ್ಮ ಪಂಥಗಳ ರಾಸಾಯನ ಈ ನಾಥಪಂಥ. ಮಧ್ಯಯುಗದಲ್ಲಿ ಧರ್ಮವನ್ನು ವಾಮಾಚಾರ ಕೆಸರಿನಿಂದ ಮೇಲಕ್ಕೆತ್ತಿದ ಮಹಾಪುರುಷನೀತಿ. ಗೋರಕ್ಷನಾಥನ ನಾಥ ಪಂಥದ ಪ್ರಭಾವ ಮುದ್ರೆ ಭರತ ಖಂಡದ ಎಲ್ಲಾ ರಾಜ್ಯಗಳಲ್ಲಿಯೂ ಸಹ ಒಂದಲ್ಲಾ ಒಂದು ರೂಪದಲ್ಲಿ ಕಂಡು ಬರುತ್ತದೆ.

ವೀರಶೈವ ಸಾಹಿತ್ಯದಲ್ಲಿ ಹಲವಾರು ಸಿದ್ಧರ ಪ್ರಸಂಗಗಳು ಉಲ್ಲೇಖವಾಗಿದೆ. ಬಸವಣ್ಣನವರ ವಚನದಲ್ಲಿ ಒಲೆಯುಟಿಯನುರಿಪಿದಡೆ ಹೊಗೆ ಗೋಳಕನಾಥನ ಕೊರಳ ಸುತ್ತಿತು. ಮಹೀತಳನ ಜಡೆ ಸೀಯಿತ್ತು ಮಾರಿಜನ ಶಿರ ಬೆಂದಿತ್ತು (ಬಸವ ೯೩೦) ಎಂದು ಹೇಳಿ ಗೋರಕ್ಷನಾಥನನ್ನು ಉಲ್ಲೇಖಿಸಿದೆ. ಪ್ರಭುದೇವ, ಹರಿಹರ, ರಾಘವಾಂಕ ಮೊದಲಾದವರ ಕಾವ್ಯಗಳಲ್ಲಿ ಹಲವು ಸಿದ್ಧರ ಪ್ರಸಂಗಗಳು ಬರುತ್ತವೆ. ಈ ಸಿದ್ಧರನ್ನು ನವಕೋಟಿ ಸಿದ್ಧರು ಅಷ್ಟಾದಶಸಿದ್ಧರು ಎಂದು ಕರೆಯುವ ಸಂಪ್ರದಾಯವಿದೆ. ಹಾಗೆಯೇ ರೇವಣಸಿದ್ಧ, ಅಲ್ಲಮಪ್ರಭುಗಳು ಮೊದಲು ನಾಥಸಿದ್ಧರಾಗಿದ್ದರೆಂದು ಕೆಲವು ವಿದ್ವಾಂಸರ ಅಭಿಪ್ರಾಯ.

ನಾಥಪಂಥದ ಒಂದು ಶಾಖಾ ಸಂಸ್ಥಾಪಕನಾದ ಅಥವಾ ಮುಖಂಡನೆನ್ನಲಾದ ಗೋರಕ್ಷಕನಾಥನೂ ಕ್ಷತ್ರಿಯನೆಂದೂ ಸುಪ್ರಸಿದ್ಧ ಇತಿಹಾಸಕಾರ ಶ್ರೀ ದೇಸಾಯಿ ಪಾಂಡುರಂಗರಾಯರು (ಶಿವಾನುಭವ - ೧೯೪೨) ಅಭಿಪ್ರಾಯ ಪಟ್ಟಿದ್ದಾರೆ. ಇದೇ ಪತ್ರಿಕೆಯ ೧೯೪೪ ರ ಮಾರ್ಚ್ - ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾದ ಶಿವಶರಣರ ಚರಿತ್ರೆಗಳು ಎಂಬ ಲೇಖನದಲ್ಲಿ ಶ್ರೀ ಪ.ಗು.ಹಳಕಟ್ಟಿಯವರು ವಿಜಾಪುರ ಜಿಲ್ಲೆ ಪಟ್ಟದಕಲ್ಲು ಎಂಬ ಗ್ರಾಮವು ಗೋರಕ್ಷನ ಜನ್ಮಸ್ಥಳವೆಂದೂ ಅವನು ಆಗ ಅಲ್ಲಿ ಆಳುತ್ತಿದ್ದ ರಾಜನೊಬ್ಬನ ಗೋವುಗಳನ್ನು ಕಾಯುವ ಕೆಲಸ ಮಾಡುತ್ತಿದ್ದನೆಂದೂ ಆದ್ದರಿಂದ ಈತನಿಗೆ 'ಗೋರಕ್ಷಕ' ಎಂಬ ಹೆಸರು ಪ್ರಾಪ್ತವಾಯ್ತು ಎಂದು ಅಭಿಪ್ರಾಯ ಪಟ್ಟಿದ್ದಾರೆ.

ರೇವಣ್ಣಸಿದ್ಧ ಹಾಗೂ ಪ್ರಭುದೇವ ರತ್ನಾಕರವರ್ಣಿ ಇವರು ಗೋರಕ್ಷಕನಾಥನ ಸಮಕಾಲೀನರಾಗಿದ್ದು ನಾಥಪಂಥದ ಹಲವಾರು ತತ್ವಗಳನ್ನು ಗರ್ಭೀಕರಿಸಿ ಕೊಂಡಿದ್ದರು. ಅಷ್ಟೇ ಅಲ್ಲ ಅಲ್ಲಮಪ್ರಭುವಿನ ವಚನಗಳಿಗೂ ಗೋರಕ್ಷಕನಾಥನ ಹಿಂದೀ ವಾಣಿಗೂ ಸಾಕಷ್ಟು ಸೌಮ್ಯವಿದೆ. ಈ ರೀತಿ ತಾಂತ್ರಿಕ ಬೌದ್ಧಧರ್ಮಕ್ಕೆ ಶೈವರೂಪ ಕೊಟ್ಟು ಬ್ರಹ್ಮಚರ್ಯ, ಸದಾಚಾರ, ಯೋಗ ಮತ್ತು ಸ್ವಾನುಭೂತಿಗೆ ಎಲ್ಲಿಲ್ಲದ ಮಹತ್ವ ನೀಡಿ ಹಿಂದೂ ಧರ್ಮಕ್ಕೆ ಒಂದು ಹೊಸ ಕಾಯಕಲ್ಪ ನೀಡಿದ ಮಹಾಪಂಥ ನಾಥಪಂಥ.

( ಈ ನಾಥಪಂಥದ ವಿವಿಧ ಸಿದ್ಧ ಪೀಠಗಳಿದ್ದು ಕೆಲವು ಭಿನ್ನಾಭಿಪ್ರಾಯಗಳಿದ್ದುಪ್ರಬೋಧ ಚಂದ್ರ ಬಾಗಚಿಯವರ ಪ್ರಕಾರ ೨ ಪರಂಪರೆಗಳನ್ನು ಉಲ್ಲೇಖಿಸಿದ್ದಾರೆ. ಒಂದರ ಪ್ರಕಾರ : ಜಾಲಂದರ್, ಓಡಿಯಾನಾ, ಅರ್ಬೂದ, ಪೂರ್ಣಗಿರಿ. ಎರಡನೇಪ್ರಕಾರ : ಜಾಲಂದರ್, ಓಡಿಯಾನಾ, ಕಾಮರೂಪ ಪೂರ್ಣಗಿರಿ. ನಾಥ ಸಂಪ್ರದಾಯದ ೧೨ ಪಂಥಗಳಲ್ಲಿ ಮೂರು ಕೇಂದ್ರಗಳು ಅಬೋಹಕ, ಗುರುದಾಸಪುರ, ಮತ್ತು ಝೀಲಂನಲ್ಲಿ ಇಂದಿಗೂ ಇವೆ. ಝೀಲಂನ ಗೋರಖ ಟೇಲಾ ನಾಥಸಿದ್ಧರ ಬಹುದೊಡ್ಡ ಕೇಂದ್ರ ಕಾಮಖ್ಯಾ ಓಡಿಯಾನಾ)

ನಾಥ ಸಂಪ್ರದಾಯವು ಪೌರಾಣಿಕ, ಐತಿಹಾಸಿಕಗಳಲ್ಲಿ ಹಾಸು ಹೊಕ್ಕಾಗಿದೆ. ಆದ್ದರಿಂದಲೇ ಈ ಸಂಪ್ರದಾಯಕ್ಕೆ ಸನಾತನಧರ್ಮ ಎನ್ನುವರು. ಶ್ರೀ ಆದಿನಾಥನಿಂದ ನಟೇಶ್ವರಪಂಥ, ಶ್ರೀ ಪಾರ್ವತಿಯಿಂದ ಆಯಿಪಂಥ, ಬ್ರಹ್ಮನಿಂದ -ಬ್ರಹ್ಮನಾಥಪಂಥ, ವಿಷ್ಣುವಿನಿಂದ ಮನ್ನಾಥಪಂಥ, ಶ್ರೀರಾಮನಿಂದ ರಾಮನಾಥಪಂಥ, ಭೀಷ್ಮಾಚಾರ್ಯನಿಂದ ಗಂಗನಾಥ ಪಂಥ, ಧರ್ಮರಾಯನಿಂದ ಧರ್ಮನಾಥಪಂಥ, ಮಾರುತಿಯಿಂದ ಧ್ವಜ ಪಂಥ, ರಾವುಳೇಶ್ವರನಿಂದ ರಾವಳಪಂಥ, ಕಪಿಲ ಮುನಿಯಿಂದ ಕಪಿಲನಾಥಪಂಥ, ಕೃಷ್ಣನಿಂದ ಗೋಪಾಲ ಪಂಥ, ವಾಗಲ ಪಂಥ ಹನ್ನೆರಡು (ಬಾರಹ) ಪಂಥಗಳು ಸಾಂಪ್ರದಾಯಕವಾಗಿ ಅಲ್ಲಲ್ಲಿ ಸ್ಥಾಪನೆಯಾಗಿವೆಯೆಂದು ನಾಥಪಂಥಿಗಳು ಹೆಸರಿಸಿದ್ದಾರೆ.

ಕರ್ನಾಟಕದಲ್ಲಂತೂ ಹಲವಾರು ಕಡೆ ಸಿದ್ಧ ಪರಂಪರೆಗಳು ಇದ್ದು ಕಾಣುತ್ತವೆ. ಉತ್ತರ ಕರ್ನಾಟಕದ ಬೇಡಕೀಹಾಳ ಕಪ್ಪದ ಗುಡ್ಡ ಮೊದಲಾದ ಕಡೆ ನಾಥರ ಅವಶೇಷಗಳಿವೆ. ಮೈಸೂರು ಜಿಲ್ಲೆಯ ಕೃಷ್ಣರಾಜನಗರದ ಬಳಿ ಇರುವ ಕಪ್ಪಡೀ ಕ್ಷೇತ್ರದಲ್ಲಿ ಇಂದಿಗೂ ನಾಥಪಂಥದ ಮಠವಿದೆ. ಇದರಿಂದ ಈ ನಾಥಪಂಥವು ಕರ್ನಾಟಕದಲ್ಲಿ ಬಹಳ ಹೆಚ್ಚಳವನ್ನು ಪಡೆಯಿತು ಎಂಬುದು ಸ್ಪಷ್ಟ. ಮುಂದೆ ಇದರ ಕೆಲವು ಅಂಶಗಳು ವೀರಶೈವದಲ್ಲಿ ಜೀರ್ಣವಾದವು. ಹೆಸರಾಂತ ಮಂಟೇಸ್ವಾಮಿಗಳು ಕೂಡಾ ನಾಥಪರಂಪರೆಯದವನಾಗಿದ್ದಾನೆ ಎಂದು ತಿಳಿಯಬಹುದು.

ಭರತ ಖಂಡದಲ್ಲಿ ನಾಥಪಂಥವು ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿದ್ದು ಉತ್ತರ ಭಾರತದಲ್ಲಿ ಮಾತ್ರ ಉಚ್ಛ್ರಾಯ ಸ್ಥಿತಿಯಲ್ಲಿದ್ದು ದಕ್ಷಿಣ ಭಾರತದಲ್ಲಿ ಮಾತ್ರ ಕ್ಷೀಣಿಸುತ್ತಾ ಬಂದಿದೆ. ಇಲ್ಲಿ ಜೋಗಿ ಜನಾಂಗದವರು ಮಾತ್ರ ನಾಥಪಂಥದ ಅನುಯಾಯಿಗಳಾಗಿದ್ದು ಉಳಿದ ಕೆಲವು ಜನಸಮುದಾಯದವರು ಮಾತ್ರ ನಿರ್ಲಕ್ಷಿಸಿದ್ದುದೇ ಮುಖ್ಯ ಕಾರಣವಾಗಿದೆ.

ನಾಥ ಸಂಪ್ರದಾಯದ ವಂಶಸ್ಥರೆಲ್ಲರೂ ತಮ್ಮ ಹೆಸರಿನ ಕೊನೆಯಲ್ಲಿ ನಾಥ ಎಂಬ ಶುಭನಾಮವನ್ನು ಸೇರಿಸಿ ಕೊಂಡಿರುವುದು ಸಹಜವಾಗಿರುತ್ತದೆ. ಇವರಿಗೆ ಉಪನಯನಾದಿ ಸಂಸ್ಕಾರಗಳಿವೆ. ಆದರೆ ಈ ಸಂಸ್ಕಾರವು ನಾಥ ಸಂಪ್ರದಾಯದಂತೆ ಉಣ್ಣೆಯ ದಾರಕ್ಕೆ ನಾದಿ ಪವಿತ್ರ ಮತ್ತು ರುದ್ರಾಕ್ಷಿಗಳನ್ನು ಜೋಡಿಸಿದ ಯಜ್ಞೋಪವೀತನನ್ನು ಶ್ರೀ ಗುರುಗಳರವರಿಂದ ಧಾರಣೆ ಮಾಡಿಸುತ್ತಾರೆ. ಈ ಪಂಥದ ಜೋಗಿ ಸಮಾಜದವರು ತಮ್ಮ ಗಂಡುಮಕ್ಕಳಿಗೆ ಅವರ ೧೨ನೆಯ ವಯಸ್ಸಿನಲ್ಲಿ ಈ ಸಂಪ್ರದಾಯಕ್ಕನುಗುಣವಾಗಿ ಉಪನಯನವನ್ನು ಮಾಡಿಸುತ್ತಾರೆ.

ಗೋರಕ್ಷಕನಾಥನಿಂದ ರಚಿಸಲ್ಪಟ್ಟ ಎಂದು ಹೇಳುವ ಶಾಬರ ಮಂತ್ರಗಳು ಪ್ರಭಾವಶಾಲಿಯಾಗಿದ್ದು ಎಲ್ಲಾ ಅತರ್ವಣವೇದ ಮಂತ್ರಗಳಿಗಿಂತಲೂ ಅಭೂತಪೂರ್ವವಾಗಿ ಫಲ ಕೊಟ್ಟು ಕಾಪಾಡುವ ಮಂತ್ರಗಳಾಗಿವೆ. ಇವುಗಳನ್ನು ಅಡವಿಯಲ್ಲಿ ವಾಸಿಸುವ ಬೇಡರು, ಗೋಸಾಯಿಗಳು, ಸಾಧು ಸಂತರು ತಮ್ಮ ರಕ್ಷಣೆಗಾಗಿ ಉಪಯೋಗಿಸುತ್ತಿದ್ದರು. ಇಂದಿಗೂ ಸಹ ಈ ಮಂತ್ರಗಳನ್ನು ಹಿಮಾಲಯ ಪರ್ವತಗಳಲ್ಲಿ ವಾಸಮಾಡುತ್ತಿರುವ ನಾನಾ ಸಾಧುಗಳು ತಮ್ಮ ರಕ್ಷಣೆಗಾಗಿ ಉಪಯೋಗಿಸುತ್ತಿದ್ದಾರೆ. ಇವು ಹಿಂದಿ ಭಾಷೆಯಲ್ಲಿ ರಚನೆಯಾಗಿ ಓದಲು ಪ್ರಾಸಬದ್ಧವಾಗಿವೆ.

ನಾಥಪಂಥದವರು ಮುಖ್ಯವಾಗಿ ಶಿವ ಮತ್ತು ಶಕ್ತಿಯನ್ನು ಆರಾಧಿಸುವವರು. ಶಿವನಲ್ಲಿ ಶಕ್ತಿಯಿದೆ, ಶಕ್ತಿಯಲ್ಲಿ ಶಿವನಿದ್ದಾನೆ ಅವರೀರ್ವರಲ್ಲಿ ವ್ಯತ್ಯಾಸವಿಲ್ಲ. ಶಿವಶಕ್ತಿಯರು ಚಂದ್ರ ಮತ್ತು ಚಂದ್ರನ ಬೆಳಕಿನಂತೆ ಅನೂನ್ಯ ಎಂಬುದು ನಾಥ ಪಂಥದವರ ಪ್ರತಿಪಾದನೆ.

ಕಾಳ ಭೈರವ ಇವರ ಆರಾಧ್ಯ ದೈವ. ಆದ್ದರಿಂದ ಇವರಿಗೆ ಕಾಳಭೈರವ ಪಂಥದವರು ಎಂಬ ಇನ್ನೊಂದು ಹೆಸರು. ಕಾಳ ಎಂದರೆ ಶಕ್ತಿ, ಭೈರವ ಎಂದರೆ ಶಿವ ಹೀಗಾಗಿ ಶಿವಶಕ್ತಿಯ ಪೂಜಕರು ಎಂದರ್ಥ.

ನಾಥಪಂಥವೆಂಬುದು ನಾಥ ಸಂಪ್ರದಾಯವನ್ನು ಅನುಸರಿಸಿಕೊಂಡು ಬಂದಿರುವ ಪಂಗಡ (ಪಂಥ)ದ ಯೋಗಿಗಳ ಸಮುದಾಯ. 'ಯೋಗಿ' ಶಬ್ದ ತದ್ಭವವಾದ ಜೋಗಿ. ಆದ್ದರಿಂದ ನಾಥಸಂಪ್ರದಾಯದ ಕ್ಷೇತ್ರಗಳಲ್ಲಿ ಜೋಗಿ ದೇವಸ್ಥಾನಗಳು ಕಂಡುಬರುತ್ತವೆ.

ಈ ಪಂಥದ ಅನುಯಾಯಿಗಳು ಒಬ್ಬರನ್ನೊಬ್ಬರು ಭೇಟಿಯಾದಾಗ ಮತ್ತು ಗುರುಗಳಿಗೆ, ದೇವರಿಗೆ ನಮಸ್ಕರಿಸುವಾಗ, ಆದೇಶ್ - ಆದೇಶ್ ಎಂದು ಹೇಳುತ್ತಾರೆ. ಆದೇಶ್ ಎನ್ನುವ ಈ ವಾಕ್ಯದಿಂದ ನಮ್ಮ ಗರ್ವ, ದ್ವೇಷ, ಸುಖ, ದುಃಖ, ಕೋಪ ಇತ್ಯಾದಿಗಳು ನಾಶವಾಗುತ್ತವೆಯಂತೆ. ಮಂಗಳೂರಿನ ಕದರಿ ಮಠವು ಕೇವಲ ಕರ್ನಾಟಕಕ್ಕೆ ಮಾತ್ರವಲ್ಲದೆ ಭಾರತದುದ್ದಕ್ಕೂ ಹೆಸರುಗಳಿಸಿದೆ. ಇಲ್ಲಿ ಈ ಪಂಥದ ಪ್ರವರ್ತಕರೆನ್ನಲಾದ ಮತ್ಸ್ಯೇಂದ್ರನಾಥ ಮತ್ತು ಗೋರಕ್ಷನಾಥರು (ಏಳನೆಯ ಶತಮಾನದಲ್ಲಿ) ತಪಸ್ಸನ್ನಾಚರಿಸಿದ ಪುಣ್ಯಕ್ಷೇತ್ರ ಇದಾಗಿದೆ.

ಭಾರತದಲ್ಲಿ ಉಜ್ಜೈನಿ, ಅಯೋಧ್ಯ, ಹರಿದ್ವಾರ್, ಬದ್ರಿನಾಥ್, ನೇಪಾಳ, ಗೋರಖ್‌ಟಿಲ್ಲಾ, ಗಂಗಾಸಾಗರ್, ಆದೋಬರ್, ರಾಮೇಶ್ವರ, ಅಯೋಧ್ಯ, ದ್ವಾರಕ ಮೊದಲಾದವು ಈ ಪಂಥದ ಮುಖ್ಯ ಕೇಂದ್ರಗಳಾಗಿವೆ. ಕರ್ನಾಟಕದಲ್ಲಿ ಕದರಿ ಸೇರಿದಂತೆ ವಿಟ್ಲ, ಕುಂದಾಪುರದ ಎಡಮೊಗ, ಹಲವರಿ ಮಠ, ಚಂದ್ರಗುತ್ತಿ, ಹಂಡಿವಡಗನಾಥ, ಸೌಂದತ್ತಿ ಮೊದಲಾದವು ಪ್ರಮುಖ ಕೇಂದ್ರಗಳಾಗಿವೆ.

ಹಿಂದೂಸ್ತಾನದಲ್ಲಿ ಕುಂಬಮೇಳಗಳನ್ನು ನಡೆಸುವುದು ತುಂಬಾ ಮಹತ್ವದ್ದಾಗಿರುತ್ತದೆ. ನಾಲ್ಕು ಕಡೆಗಳಲ್ಲಿ ಆಚರಿಸಲಾಗುತ್ತದೆ. ಹರಿದ್ವಾರ, ಪ್ರಯಾಗ, ಉಜ್ಜೈನಿ, ತ್ರಂಬಕೇಶ್ವರ. ಪ್ರತಿಯೊಂದು ಸ್ಥಳದ ಕುಂಬಮೇಳಗಳಿಗೆ ಮೂರುವರ್ಷಗಳ ಅಂತರವಿರುತ್ತದೆ. ಇದು ಗುರುಗ್ರಹದ ಚಲನೆಯನ್ನು ಹೊಂದಿರುತ್ತದೆ. ಹನ್ನೆರಡು ರಾಶಿಗಳಲ್ಲಿ ಗುರುವು ಮೂರು ವರ್ಷಗಳಿಗೊಮ್ಮೆ ನಿರ್ಧಿಷ್ಠ ರಾಶಿಯಲ್ಲಿರುವಾಗ ಆಯಾ ಕ್ಷೇತ್ರಗಳಲ್ಲಿ ಕುಂಬಮೇಳವು ನಡೆಯುತ್ತದೆ.

ನಾಥ ಪಂರಪರೆಯು ಸಾಂಪ್ರದಾಯಿಕ ಗುರು ಪರಂಪರೆಯಾಗಿದ್ದುದರಿಂದ ಗುರುಗ್ರಹದ ಚಲನೆಗಳನ್ನು ಅವಲಂಬಿಸಿ ''೧೨'' ಎಂಬ ಸಂಖ್ಯೆಗೆ ಪ್ರಾಶಸ್ತ್ಯವನ್ನು ನೀಡಿರುತ್ತಾರೆ. ಆದ್ದರಿಂದಲೇ ಮಂಗಳೂರಿನ ಕದರಿ ಶ್ರೀ ಯೋಗೀಶ್ವರ ಜೋಗಿ ಮಠವನ್ನು ಪ್ರಧಾನವಾಗಿರಿಸಿಕೊಂಡು ತ್ರಂಬಕೇಶ್ವರದವರೆಗಿನ ಎಲ್ಲಾ ಮಠ ಮಂದಿರಗಳಿಗೆ ಪೀಠಾಧಿಪತಿಗಳನ್ನು ಬದಲಾಯಿಸುವ ಕ್ರಮವನ್ನು ಹನ್ನೆರಡು ವರ್ಷಗಳಿಗೊಮ್ಮೆಯೇ ನಿರ್ಣಯಿಸಿರುತ್ತಾರೆ. ಮೊನ್ನೆ ತಾನೆ ದಿನಾಂಕ ೦೮ - ೦೧-೨೦೦೪ ರಲ್ಲಿ ಕದ್ರಿಯ ಯೋಗಿಶ್ವರ ಮಠಕ್ಕೆ ಶ್ರೀಸಂದ್ಯಾನಾಥಜೀ ಮಹಾರಾಜರನ್ನು ೧೦೮ ನೇ ಯೋಗಿಯಾಗಿ ವಿಧಾನ ಸೂಕ್ತ ರಾಜನನ್ನಾಗಿ ಪಟ್ಟಾಭಿಷೇಕಮಾಡಿದರು.

ಮಧ್ಯಕರ್ನಾಟಕದಲ್ಲಿ : ಚಿತ್ರದುರ್ಗದ ಪಾಳೆಯಗಾರರ ಮೇಲೆ ನಾಥ ಸಂಪ್ರದಾಯದ ಪ್ರಭಾವ ತೀವ್ರತರವಾಗಿತ್ತು ಎನ್ನುವುದಕ್ಕೆ ಚಿತ್ರದುರ್ಗದ ಬೆಟ್ಟದ ಮೇಲಿರುವ ಏಕನಾಥೇಶ್ವರಿ ಸಂಪಿಗೆ ಸಿದ್ದೇಶ್ವರ ದೇವಾಲಯಗಳು. ನಾಥ ಸಂಪ್ರದಾಯದ ಜ್ವಲಂತ ಕೇಂದ್ರವಾಗಿತ್ತೆಂದು ಇಲ್ಲಿರುವ ಅನೇಕ ಶಿಲಾಶಾಸಗಳು ಸಾಕ್ಷಿಯಾಗಿವೆ. ಕದಂಬರು ಸುಂಕೇಮಲೆಯಲ್ಲಿ ಸ್ಥಾಪಿಸಿರುವಂತೆ ಚಿತ್ರದುರ್ಗ ಸಮೀಪದಲ್ಲಿಯೇ ಚಂದ್ರವಳ್ಳಿ ಪ್ರದೇಶದಲ್ಲಿ ನಾಥ ಸಂಪ್ರದಾಯದ ಹುಲೇಗೊಂದಿ ಸಿದ್ದೇಶ್ವರ ದೇವಾಲಯವನ್ನು ಕಟ್ಟಿಸಿದ್ದರಂತೆ. ಹಾಗೆಯೇ ಮುರುಘರಾಜೇಂದ್ರಸ್ವಾಮಿಗಳ ಬೃಹನ್ಮಠವು ಎಲ್ಲಾ ನಾಥಯೋಗಿಗಳ ಪರಂಪರೆಯನ್ನು ಸ್ಮರಿಸದೆ ತಾನು ಭಿನ್ನವಾದ ಪರಂಪರೆಯನ್ನು ಅನುಸರಿಸುತ್ತಾ ನಾಥಪಂಥದ ಮುಂದುವರೆದ ರೂಪವಾಗಿದೆ.

ಹೊಯ್ಸಳ ಚಕ್ರವರ್ತಿಗಳೂ ಸಹ ಇಲ್ಲಿನ ವಿದ್ಯಾಪೀಠವಾದ ವಿದ್ಯಾಯತನಕ್ಕೆ ದಾನದತ್ತಿಗಳನ್ನು ನೀಡಿದರಲ್ಲದೆ ಹೊಯ್ಸಳರ ಮಾಂಡಲಿಕನಾದ ಬೇಡ ಜನಾಂಗದ ತಿರುಮಾದೇವ ದಂಡನಾಯಕನ ಸೇವಾಕೈಂಕರ್ಯವನ್ನು ಉದಾಹರಿಸಬಹುದು. ಈ ಕಾಮಗೇತಿ ಕುಲತಿಲಕರು ಸೀರ್ಘಟಿ ರಂಗನಾಥಸ್ವಾಮಿಯ ಆರಾಧಕರಾಗಿದ್ದರೆಂದು ತಿಳಿದುಬರುತ್ತದೆ. ಇಲ್ಲಿ ಕೆಲವು ಪುರೋಹಿತ ವರ್ಗವು ನಾಥಸಂಪ್ರದಾಯದ ಮೂಲಕ ಪಾಳೆಯಗಾರರನ್ನು ಮನವೊಲಿಸಿರಬಹುದು.

ತಂದೆಯಾದ ಕಂಪಿಲರಾಯನು ಕುಮಾರರಾಮನನ್ನು ವಧಿಸಲು ಆಜ್ಞೆ ಮಾಡಿದಾಗ ಮಹಾಮಂತ್ರಿಯಾಗಿದ್ದ ಬೈಚಪ್ಪನು ಕಾಮಗೇತಿ ನಾಯಕನ ಮಗನಾದ ಚಿತ್ರನಾಯಕನೂ ಕುಮಾರ ರಾಮನನ್ನು ಪಾರಮಾಡಲು ಯತ್ನಿಸಿದಾಗ ಕಂಪಿಲರಾಯನ ನಿಷ್ಟುರಮಾತುಗಳಿಗೆ ಬೇಸತ್ತ ಚಿತ್ರನಾಯಕನು ಆ ಪ್ರಾಂತ್ಯವನ್ನು ತೊರೆದು ಹೊಯ್ಸಳರ ಸೀಮಾ ಪ್ರದೇಶವಾದ ಈಗಿನ ಚಿತ್ರದುರ್ಗವನ್ನು ಪ್ರವೇಶಿದನು. ಆಗ ಓಬವ್ವನ ಪೂರ್ವಿಕರಿಂದ ನವನಾಥದಲ್ಲಿ ಒಬ್ಬ ನಾಥ ಶಭರನಾಥನ ಪರಿಚಯವಾಯಿತು. ನಂತರ ರಘುಸಿದ್ದರನ್ನು ದರ್ಶಿಸಿ ಇವರ ಗುಪ್ತನಿಧಿಯ ಸಹಾಯದಿಂದ ಆ ಸ್ಥಳದಲ್ಲಿ ಕೋಟೆಕೊತ್ತಲಗಳನ್ನು ನಿರ್ಮಿಸಿ ರಾಜ್ಯ ಸ್ಥಾಪನೆ ಮಾಡಿದ್ದರಿಂದ ಚಿತ್ರದುರ್ಗವೆಂದು ಹೆಸರಾಯಿತು. ಹೀಗೆ ನಾಥ ಸಂಪ್ರದಾಯದಿಂದಲೇ ಚಿತ್ರದುರ್ಗದ ಕೋಟೆಗಳು ಸ್ಥಾಪನೆಯಾದವು ಎಂದು ಹೇಳಬಹುದು.

ಇದೂ ಅಲ್ಲದೆ ಮಲ್ಲಿನಾಥನು ವಿಜಯನಗರದ ಪ್ರತಿನಿಧಿಯಾಗಿ ಆಳಿದ ಕಾಲದಲ್ಲಿ ಸಿದ್ದ ಸಂಪ್ರದಾಯದ ಕೈ ಮೇಲಾಯಿತು ಅಲ್ಲದೆ ಕದರಿ ಪ್ರಾಂತ್ಯದಲ್ಲಿ ಪ್ರಸಿದ್ಧವಾದ ನಾಥ ಸಂಪ್ರದಾಯದ ಪದಾಧಿಕಾರಿಗಳು ಈ ಕಾಲದಲ್ಲಿಯೇ ಹೊಸದುರ್ಗದ ಆಸುಪಾಸಿನ ಬೆಟ್ಟಗಳಲ್ಲಿ ಚಿಕ್ಕದಾದ ಕದರಿ ಪೀಠವನ್ನು ಸ್ಥಾಪಿಸಿದಕೊಂಡದ್ದರಿಂದ ಕಾದ್ರಿಮಲೆ ಅಥವಾ ಗಾದ್ರಿಮಲೆ ಎಂಬ ಹೆಸರು ಪ್ರಾಪ್ತವಾಯ್ತು. ಈ ನಾಥ ಸಂಪ್ರದಾಯದ ಪೀಠಾಧಿಕಾರಿಗಳ ವಂಶಸ್ಥರನ್ನು ನಾವು ಈಗಲೂ ಈ ಪ್ರಾಂತ್ಯದಲ್ಲಿಯ ಹಳ್ಳಿಯಾದ ಉಪ್ಪರಿಗೇನಹಳ್ಳಿಯಲ್ಲಿ ಜೋಗಿಗಳು ಎಂಬ ಹೆಸರಿನಿಂದ, ಜಾತಿಯ ರೂಪದಲ್ಲಿ ಕಾಣಬಹುದಾಗಿದೆ. ಅದೇ ತಾನೇ ವೀರಶೈವ ಧರ್ಮ ಕಾಲಿರಿಸಿದ ಸಂದರ್ಭದಲ್ಲಿ ಸಿದ್ದ ಹಾಗೂ ನಾಥ ಸಂಪ್ರದಾಯದ ಗುರುಗಳು ಸಮಾಜ ಹಾಗೂ ರಾಜ್ಯ ಕಾರುಬಾರುಗಳಲ್ಲಿ ಪ್ರಮುಖ ಪಾತ್ರವಹಿಸಿದ್ದು ಇದರ ಸಾಂಕೇತಿಕವಾಗಿ ತಮ್ಮದೇ ಆದ ಸಿದ್ಧನಾಥ ಎಂಬ ಮುದ್ರೆಯನ್ನು ಪಾಳೆಯಗಾರ ರಾಜಮನೆತನಕ್ಕೆ ನೀಡಿದ್ದರು. ಹೀಗೆ ಇದು ತಲತಲಾಂತರಗಳಿಂದ ಸಾಗಿ ಬಂದು ಈಗ ಮದಕರಿ ವಂಶಸ್ಥನಾದ ಟಿ. ಎಸ್. ಗಂಡುಗಲಿಯ ಹತ್ತಿರವಿರುವುದನ್ನು ಗಮನಿಸಬಹುದು.

ಇವರು ನಾಥ ಪಂಥಕ್ಕೆ ಶರಣಾಗಿ ಈ ಪಂಥದಲ್ಲಿ ದೀಕ್ಷೆ ಪಡೆದ ಅರಸು ನಾಯಕರುಗಳು ವರ್ಷಕ್ಕೊಂದು ಸಾರಿ ಜೋಗಪ್ಪನಾಗಿ ವೇಷಧರಿಸಿ ಬಿಕ್ಷಾಟನೆಯ ಮೂಲಕ ಧರ್ಮಾಚರಣೆ ಮಾಡಬೇಕೆಂಬ ವಿಧಿ ನಿಯಮವಿದ್ದು ಇಂದಿನವರೆಗೂ ಈ ಪರಂಪರೆಯು ಎಡಬಿಡದೆ ಸಾಗಿ ಬಂದಿದೆ ಇದೂ ಅಲ್ಲದೆ ನಾಯಕ ಜನಾಂಗದವರು ನುಂಕೇಮಲೆ ಯಲ್ಲಿರುವ ಗೋರಕ್ಷಕನಾಥನಿಗೆ 'ಸಿದ್ದುಬುಕ್ತಿ' ಎಂದು ಮಾಂಸದ ಎಡೆಯನ್ನು ಹಾಕಿ ನಂತರ ಊಟ ಮಾಡುವ ಸಂಪ್ರದಾಯವಿದೆ.) ಭೈರವನ ಪುರಾಣದ ಪ್ರಕಾರ ಕಾಟಣ್ಣನ ವಂಶಸ್ಥರು ಎಂದು ಹೇಳಿಕೊಳ್ಳುವ ನಾಯಕನಹಟ್ಟಿ ಹತ್ತಿರವಿರುವ ದೊರಣಮಾಂಡ್ಲಹಟ್ಟಿ (ರಾಮಸಾಗರ) ಎಂಬ ಗ್ರಾಮದಲ್ಲಿ ಸುಮಾರು ಸಂಖ್ಯೆಯಲ್ಲಿ ಬೇಡರಿದ್ದು ಕಾರಹುಣ್ಣಿಮೆಯಲ್ಲಿ ನುಂಕೇಮಲೆ ಭೈರವನಿಗೆ ಹಲವಾರು ಬೇಟೆಗಳನ್ನು ಬಲಿಕೊಟ್ಟು ತಮ್ಮ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದಿದ್ದಾರೆ. (ನುಂಕೇಮಲೆ ಸಿದ್ದೇಶ್ವರನು ತಮ್ಮ ಮನೆದೇವರೆಂದು ಹೇಳಿಕೊಂಡು, ಸಿದ್ದಣ್ಣ, ಸಿದ್ದಮ್ಮ, ನುಂಕಪ್ಪ ಎಂಬುದಾಗಿ ಕೆಲವು ವ್ಯಕ್ತಿ ನಾಮಗಳನ್ನು ಹೊಂದಿರುವುದು ವಿಶೇಷ.

ನವನಾಥರಲ್ಲಿ ಒಬ್ಬನಾಥ (ಗೋರಕ್ಷನಾಥನ ಪಂಥವು ಪ್ರಮುಖವಾಗಿದ್ದು ಇದರ ಕೇಂದ್ರ ಪೀಠ ಮಂಗಳೂರಿನ ಶ್ರೀಕ್ಷೇತ್ರ ಕದಳಿ (ಕದ್ರಿ) ಯೋಗೇಶ್ವರ ಮಠವಾಗಿದೆ. ಈ ಪಂಥದ ಶಾಖೆಯಾಗಿ ಶ್ರೀನುಂಕೇಮಲೆ ಸಿದ್ದೇಶ್ವರ (ಭೈರವ)ನ ಕ್ಷೇತ್ರವು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಪಕ್ಕದಲ್ಲಿ ಕಂಡುಬರುತ್ತದೆ. ಇಲ್ಲಿ ಒಂದು ಮಠವನ್ನು ಭೈರವನ ಪ್ರತಿರೂಪವೆಂತಲೂ, ಜೋಗಿ ಎಂತಲೂ, 'ಗೋರಕ್ಷನಾಥ' ಎಂದೂ ಸಹ ಕರೆಯುವ ವಾಡಿಕೆಯಿದೆ. ಹಾಗೂ ಮೂರು ಸಾಲು ಬೆಟ್ಟಗಳಲ್ಲಿ ಒಂದು ಸಾಲಿನಲ್ಲಿರುವ ಒಂದು ಬೆಟ್ಟವನ್ನು ಜೋಗಪ್ಪನ ಗುಡ್ಡವೆಂತಲೂ ಕರೆಯುತ್ತಾರೆ.

ಈ ಮೊದಲೇ ಹೇಳಿರುವ ಹಾಗೆ ಗೋರಕ್ಷನಾಥನು ಗೋಗಳನ್ನು ಸಂರಕ್ಷಿಸುತ್ತಿದ್ದ ಎನ್ನುವ ಹಾಗೆ ನುಂಕೇಮಲೆಯಲ್ಲಿಯೂ ಸಹ ಇದರ ಪ್ರತೀಕವಾಗಿ ೫೦-೬೦ ಗೋವುಗಳಿರುವುದನ್ನು ಕಾಣಬಹುದು. ಆದರೆ ನಾಥಪಂಥ ನೆಲೆಗೊಳ್ಳುವ ಮೊದಲೇ ನುಂಕಪ್ಪ ಈ ಪ್ರದೇಶದಲ್ಲಿ ನೆಲೆಸಿರುವುದು ಸ್ವಪ್ಪ ಅಂದಿನಿಂದಲೂ ಗೋಗಳಿವೆ.[1] ಆದ್ದರಿಂದ ಸಾಂಸ್ಕೃತಿಕವಾಗಿ ನೋಡಿದಾಗ ಕರ್ನಾಟಕದ ವೀರರಾದ ಮಂಟೇಸ್ವಾಮಿ, ಜುಂಜಪ್ಪ ಇವರು ಸಮಾಜದೊಂದಿಗೆ ಮುಖಾಮುಖಿಯಾದಂತೆ ನುಂಕೇಮಲೆ ಭೈರವನೂ ಸಹ ಒಂದು ಕಾಲದಲ್ಲಿ ಸಮಾಜ ಸಂಸ್ಕೃತಿಯೊಂದಿಗೆ ಸಾಂಸ್ಕೃತಿಕ ನಾಯಕನಾಗಿ ಕಂಡು ಬಂದಿರಬಹುದೇ ಎಂದು ಊಹಿಸಲಾಗಿದೆ.

ನಾಥಪಂಥವು ಇದರ ಶಾಖಾಮಠಗಳಿಗೆ ಮಠಾಧಿಪತಿಗಳಾಗಿ ಸ್ವಾಮಿಗಳನ್ನು ನೇಮಿಸುತ್ತಾರೆ. ಈಗ ನುಂಕೇ ಮಲೆಭೈರವ ಕ್ಷೇತ್ರದಲ್ಲಿ ೧೧೨ ಮಠಾಧಿಪತಿಗಳ ನಂತರ ಈಗ ರಾಜಗುರು ಮಂಗಲನಾಥಾಜೀರವರು ೧೧೩ನೇ ಪಟ್ಟಾಧ್ಯಕ್ಷರಾಗಿದ್ದಾರೆ. ಇವರನ್ನು ಸ್ಥಳೀಯರು ಬಾವಾಜಿಗಳು, ಗೋಸಾಯಿಗಳು, ಪರದೇಶಿಗಳೆಂದು ಕರೆಯುವ ರೂಢಿಯಲ್ಲಿದೆ. ಇವರನ್ನು ಸ್ಥಳೀಯ ಮೂವತ್ತೂರು ಹಳ್ಳಿಗರೂ ಒಪ್ಪಿಗೆ ಸೂಚಿಸಿದಾಗ ಮಾತ್ರ ಪಟ್ಟಾಭಿಷೇಕ ವಾಗುತ್ತಿತ್ತು. ಹಾಗೆಯೇ ಸಿಡಿಯಾಡುವ ಪರಂಪರೆಯನ್ನು ಗಮನಿಸಿದಾಗ ಇದೊಂದು ನಾಥಪಂಥದ ಹಠಯೋಗದ ಒಂದು ಅಂಗವೆಂದು ತಿಳಿದುಬರುತ್ತದೆ.[1] ಹಿರಿಯರ ಮೌಖಿಕವಾಣಿಯಂತೆ ಶ್ರೀನುಂಕೇಮಲೆ ಕ್ಷೇತ್ರದ ಮಲ್ಲಿಕಾರ್ಜುನ ದೇವಸ್ಥಾನದ ಎಡಭಾಗದಲ್ಲಿ ನುಂಕಪ್ಪಗವಿಯೆಂಬ ಸ್ಥಳದಲ್ಲಿ ಸುಗಂಧ ವಾಸನೆಯು ಬರುತ್ತಿದ್ದು, ಗಂಟೆಯ ಶಬ್ದ ಓಂ ನಮೋ ಎಂಬ ಶಬ್ದಗಳು ಕೇಳಿಬರುತ್ತಿದ್ದವಂತೆ. ಇದನ್ನು ಗಮನಿಸಿದಾಗ ಸಿದ್ದರು ಅಷ್ಟ ಸಿದ್ಧಿ ಸಾಧನೆಗಾಗಿ ಅಗ್ಗಿಂದಾಗ್ಗೆ ಬೆಟ್ಟಕ್ಕೆ ಬರುತ್ತಿದ್ದರು ಎಂದು ತಿಳಿಯಬಹುದು.

ಕರ್ನಾಟಕದಲ್ಲಿ ಸಿದ್ಧ ಪರಂಪರೆಯು ವ್ಯಾಪಕವಾಗಿ ಹರಡಿತ್ತು ಎನ್ನುವುದಕ್ಕೆ ಸಾಕ್ಷಿಯಾಗಿ ಸಿದ್ದ ಜೋಗಿಗಳ ಹೆಸರಿನಲ್ಲಿರುವ ನೂರಾರು ಹಳ್ಳಿಗಳು ಬೆಟ್ಟಗಳು ಸೂಚಿಸುತ್ತವೆ. ಸದರಿ ಮಠಕ್ಕೆ ಸೇರಿದ ಕಿನ್ನರಿ ಜೋಗಿಗಳಿಗೆ ನುಂಕೇಮಲೆಯ ಮಠದಿಂದ ಬಿಕ್ಷಾಟನೆಗಾಗಿ ಹಕ್ಕು ಪತ್ರಕೊಟ್ಟು ಕಳಿಸುವರು. ಈ ಕಿನ್ನರ ಜೋಗಿಗಳು ಪ್ರತಿವರ್ಷ ಜಾತ್ರೆಯ ವೇಳೆಗೆ ಮಠಕ್ಕೆ ಒಪ್ಪಿಸುವರು. ನಾಯಕನಹಟ್ಟಿಯ ಹತ್ತಿರ ದೇವರಹಳ್ಳಿಯಲ್ಲಿ ವೃತ್ತಿಗಾಯಕ ಕಿನ್ನರಿಜೋಗಿಗಳ ಒಂದು ಪಡೆಯೇ ಇದೆ. ಇವರ ವಿಶೇಷವೆಂದರೆ ಜಾತ್ರೆಯ ದಿವಸ ಎಲ್ಲಿಯೂ ಕಾಣಸಿಗುವುದಿಲ್ಲ. ಹೀಗೆ ನುಂಕೇಮಲೆಯು ನಾಥ ಸಂಪ್ರದಾಯಕ್ಕೊಳಪಟ್ಟರೂ ಅಸ್ತಿತ್ವ ಮತ್ತು ಆಚರಣೆಯಲ್ಲಿರುವ ಹಾಗೂ ಶೈವ - ಶಕ್ತಿ ಆರಾಧನೆಯ ಮುಂದೆ ಈಗ ಮುಸುಕು ಮುಸುಕಾಗಿದೆ. ಈಗ ನುಂಕೇಮಲೆಯೂ ಸಹ ಕೆಲವು ಶಾಖಾಮಠಗಳನ್ನು ಹೊಂದಿದ್ದು ಸ್ಥಳಗಳು ಈ ರೀತಿಯಲ್ಲಿವೆ.

೧. ಪಡ್ಡೀಕೆರೆ ಹಿರಿಯೂರು (ತಾ), ಚಿತ್ರದುರ್ಗ (ಜಿ).

೨. ವೇಣುಕಲ್ಲು ಗುಡ್ಡ (ತಾ), ಚಿತ್ರದುರ್ಗ (ಜಿ).

೩. ಕಾತ್ರಿಕ ಹಳ್ಳಿ (ತಾ), ಚಿತ್ರದುರ್ಗ (ಜಿ).

೪. ಚಿತ್ರದುರ್ಗ ಜಿಲ್ಲೆಯ ಹುಲಿಗುಂದಿ.

೫. ಚಿತ್ರದುರ್ಗಜಿಲ್ಲೆಯ ಚಂದ್ರವಳ್ಳಿ.

೬. ಕೊಪ್ಪಗೆರೆ - ಹೊಸದುರ್ಗ (ತಾ)

೭. ಜಾಗೂರು - ಹೊಸದುರ್ಗ (ತಾ)

೮. ಹೊಳಲ್ಕೆರೆ.

೯. ಕಣ್ಣು ಕುಪ್ಪೆ ಜಗಲೂರು (ತಾ), ದಾವಣಗೆರೆ (ಜಿ).

೧೦. ಪಗಡಲ ಬಂಡೆ ಚಳ್ಳಕೆರೆ (ತಾ), ಚಿತ್ರದುರ್ಗ (ಜಿ).

೧೧. ಸೋಮಲ ಬಂಡೆ ಚಳ್ಳಕೆರೆ (ತಾ), ಚಿತ್ರದುರ್ಗ (ಜಿ).

೧೨. ಕುಮುತಿ ಕೂಡ್ಲಿಗಿ (ತಾ), ಬಳ್ಳಾರಿ (ಜಿ)

ಉಪಮಠಗಳಾಗಿ ಚದುರುಗೋಳ

ಈಗ ನಾಥಪಂಥದಲ್ಲಿ ಪಂಥದ ಅನುಯಾಯಿಗಳು ತಮ್ಮ ಸಮುದಾಯಗಳನ್ನು ಸಂಘಟಿಸಲು ಹಲವಾರು ಸಂಘ ಸಂಸ್ಥೆಗಳನ್ನು ಪ್ರಚಾರ ಸಮಿತಿಗಳನ್ನು ರಚಿಸಿಕೊಂಡಿದ್ದಾರೆ. ಅಂತವುಗಳಲ್ಲಿ ಮುಖ್ಯವಾಗಿ ಅಖಿಲ ಭಾರತ ನಾಥಪಂಥ ರಾವಳ ಧರ್ಮ ಪ್ರಚಾರ ಸಮಿತಿ- ಹುಬ್ಬಳ್ಳಿ. ಬೆಂಗಳೂರು ನಾಥ ಪಂಥ ಸಮಾಜ ಸಂಘ ಮುಂತಾದವು.

**ಅಡಿಟಿಪ್ಪಣಿ :**

೧. ಸಿದ್ಧ ಸಾಹಿತ್ಯ - ಮ. ಸು. ಕೃಷ್ಣಮೂರ್ತಿ

೨. ಮಂಟೇಸ್ವಾಮಿ ಮೂಮೆಂಟ್ - ಮಹದೇವ ಶಂಕನಪುರ
ಚಿಕ್ಕಲಲ್ಲೂರು ಜಾತ್ರೆ.

೩. ನಾಥ ಪಂಥ ಕ್ಷೇತ್ರ ಜೋಗಿ ಮಠ - ಜೋಗಿ ಆನಂದ ನಾಥ
ಕದರಿ ಮಂಗಳೂರು.

೪. ಶಾಬರ ಮಂತ್ರಗಳ ಪರಿಚಯ - ಗುಂಜೂರು ರಾಮಚಂದ್ರ ಶಾಸ್ತ್ರಿ

೫. ಕಡವಶಂಭುಶರ್ಮ ಅನುವಾದಿಸಿದ - ಡಾ॥ ಶ್ರೀಧರ್. ಹೆಚ್. ಜಿ.
ನವನಾಥಕಥಾ

೬. ಕದರೀ ಮಂಜುನಾಥ ಮಹಾತ್ಮ - ಡಾ॥ ಶ್ರೀಧರ್. ಹೆಚ್. ಜಿ.

೭. ಅಂತಃಕರಣದ ನಂಟು - ಪ್ರೊ.ಸಿ. ಅಂಜನೇಯ

೮. ಪ್ರಮುಖ ಗಂಡುಗಲಿ - ಪ್ರೊ.ಸಿ. ಅಂಜನೇಯ

# ೪. ನಂಬಿಕೆ ಮತ್ತು ಆಚರಣಾತ್ಮಕ ನೆಲೆಗಳು

೪.೧. ನಂಬಿಕೆ ಮತ್ತು ಹರಕೆಗಳು ಹಾಗೂ ನಿಷೇಧಗಳು

೪.೨. ಆಚರಣೆಗಳು

೪.೨.೧. ವಾರ್ಷಿಕಾವರ್ತನದ ಆಚರಣೆಗಳು

೪.೨.೨. ಜೀವನಾವರ್ತನದ ಆಚರಣೆಗಳು

೪.೨.೩ ಸಿದ್ದ ಬುಕ್ತಿ

೪.೨.೪. ಪವಾಡಗಳ ಹಿಂದಿನ ಸ್ವರೂಪ

೪.೨.೫. ನುಂಕೇಮಲೆ ಭೈರವನ ಉಡುಗೆ - ತೊಡಿಗೆಗಳು

## ೪.೧: ನಂಬಿಕೆಗಳು ಮತ್ತು ಹರಕೆಗಳು ಹಾಗೂ ನಿಷೇದಗಳು

**ನಂಬಿಕೆಗಳು :** ನಂಬಿಕೆ ಎನ್ನುವುದು ಮಾನವನ ಬದುಕಿಗೆ ಅತ್ಯವಶ್ಯಕ. ನಾವು ಯಾರನ್ನು ನಂಬದೆ ಅನೇಕ ವಿಷಯಗಳ ಬಗ್ಗೆ ದೃಢವಾದ ನಂಬಿಕೆಯನ್ನು ಬೆಳಸಿಕೊಳ್ಳದೇ ಜೀವನ ನಡೆಸಲು ಸಾಧ್ಯವಿಲ್ಲ. ನಮ್ಮ ಈ ನಂಬಿಕೆ ದೇವರಲ್ಲಿ ನಮ್ಮ ಕುಟುಂಬದ ಸದಸ್ಯರಲ್ಲಿ ಹಾಗೂ ಗೆಳೆಯರಲ್ಲಿ ಇರಬಹುದು. ಈ ನಂಬಿಕೆಗಳ ಆಧಾರದ ಮೇಲೆಯೇ ನಾವು ದೈನಂದಿನ ಜೀವನದಲ್ಲಿ ತಲೆದೋರುವ ನಾನಾ ಸಮಸ್ಯೆಗಳನ್ನು ಎದುರಿಸಬಹುದು. ಈ ರೀತಿಯ ನಂಬಿಕೆಗಳು ಅವರ ಜೀವನದ ಗುರಿಯನ್ನು ಅವರ ಮನೋಭಾರದ ಕ್ರಿಯೆಗಳನ್ನು ನಿರ್ಧರಿಸುತ್ತವೆ. ಒಂದು ವಿಷಯದ ಮೇಲೆ. ಒಬ್ಬ ವ್ಯಕ್ತಿಯ ಮೇಲೆ, ಒಂದು ದೇವರ ಮೇಲೆ ವಿಶ್ವಾಸವಿಟ್ಟು ಹೇಳಿ ಕೊಳ್ಳುವುದನ್ನು ನಾವು ನಂಬಿಕೆ ಎನ್ನಬಹುದು.

ನಂಬಿಕೆಯು ಮಾನವನ ಮೂಲ ದ್ರವ್ಯವಾಗಿದೆ. ಮಾನವ ತನ್ನ ಉಳಿವಿಗಾಗಿ ಕೆಲವೊಂದು ನಂಬಿಕೆಗಳನ್ನು ತಂದಿದ್ದಾನೆ. ಹೀಗೆ ತರುವುದು ಮಾನವನ ಸ್ವಭಾವವಷ್ಟೇ ಅಲ್ಲದೆ ಆತನ ಸಂಸ್ಕೃತಿಯ ಸ್ವಭಾವವೂ ಆಗಿದೆ. ಪುರಾತನ ಕಾಲದಿಂದ ಮಾನವನ ನಾಗರೀಕತೆ, ಪ್ರೌಢಜ್ಞಾನ ಮತ್ತು ಸಂಸ್ಕೃತಿಯ ಹಂತವನ್ನು ಮುಟ್ಟುವವರೆಗೆ ಮಾನವನ ಅವಿರತ ಮುನ್ನಡೆಯ ಹಾದಿಯಲ್ಲಿ ನಂಬಿಕೆಯು ಬಹು ಕಾಲದಿಂದಲೂ ಬೆಳೆದು ಬಂದಿದೆ. ಸಮಾಜದ ಕೆಳಗಿನ ಸ್ಥರದಿಂದ ಮೇಲ್ತರಗತಿಯವರೆಗೆ, ಅಸಂಸ್ಕೃತರಿಂದ ಸಂಸ್ಕೃತವರೆಗೆ, ವಿದ್ಯಾವಂತರಿಂದ ಅವಿದ್ಯಾವಂತ ವರ್ಗದವರಿಗೆ ಎಲ್ಲಾ ಬಗೆಯ ಜನರಲ್ಲಿ ನಂಬಿಕೆಗಳು ಸದಾ ನಂದದಂತೆ ಉಳಿಯುತ್ತಿವೆ. ಆದ್ದರಿಂದ ಮಾನವನ ಜೀವನಕ್ಕೂ ನಂಬಿಕೆಗೂ ನಿಕಟವಾದ ಸಂಬಂಧವಿದ್ದು, ಪ್ರತಿಯೊಂದು ಜನಸಮುದಾಯವೂ ಸಹ ಅನಾದಿಕಾಲದಿಂದಲೂ ತಮ್ಮದೇ ಆದ ನಂಬಿಕೆಗಳನ್ನು ಆಚರಣೆಗಳನ್ನಿಟ್ಟುಕೊಂಡು ಬಂದಿದೆ. ಈ ನಂಬಿಕೆಗಳು ಹಳ್ಳಿಗಳಲ್ಲಿ ಆಚಾರ, ವಿಚಾರ ಮತ್ತು ಪದ್ಧತಿಗಳಲ್ಲಿ ಪ್ರಚಲಿತವಾಗಿವೆ. ಬಹುತೇಕ ನಂಬಿಕೆಗಳು ಪ್ರಕೃತಿ ಮೂಲವಾಗಿ ಹುಟ್ಟಿಕೊಂಡಿರುವುಗಳೇ ಆಗಿವೆ.

ನಂಬಿಕೆಗಳು ಮಾನವನ ಜೀವನವನ್ನು ನಿಯಂತ್ರಿಸುವ ಪ್ರಬಲ ಶಕ್ತಿಗಳಾಗಿ ಬೆಳೆದು ಉಳಿದುಕೊಂಡು ಬಂದಿವೆ. ಇವುಗಳ ಬೇರು ಜನಪದ ಸಂಸ್ಕೃತಿಯ ಅಂತರಾಳದಲ್ಲಿ ನೆಲೆಗೊಂಡಿದೆ. ''ನಂಬಿಕೆಯು ಬೆಟ್ಟವನ್ನಾದರು ಕದಲಿಸಬಲ್ಲದು'' ಎನ್ನುವ ಒಂದು ಮಾತು ನಂಬಿಕೆಯ ಮಹತ್ವವನ್ನು ಸೂಚಿಸುತ್ತದೆ. ನಂಬಿಕೆಗಳು ಜನಜೀವನದಲ್ಲಿ ನಡೆದಾಡುವ ನಾಣ್ಯಗಳಿದ್ದಂತೆ. ಈ ನಂಬಿಕೆಗಳ ಉಗಮಕ್ಕೆ ಕಾರಣ ಮಾನವನ ಮಾನಸಿಕ ಆಂದೋಲನವಾಗಿದೆ. ಜನಜೀವನದಲ್ಲಿ ನಿತ್ಯ ಜೀವನಕ್ಕೆ ಸಂಬಂಧಿಸಿದಂತೆ ವಿಫುಲವಾದ ಜನಪದ ನಂಬಿಕೆಗಳು ಹುಟ್ಟಿ - ವಿಧಿನಿಷೇಧಗಳ ಅಂಕೆಯಲ್ಲಿ ಜನಪದ ಬದುಕನ್ನು ನಿಯಂತ್ರಿಸುತ್ತವೆ.

ನಂಬಿಕೆಗಳನ್ನು ಮೂಢ ನಂಬಿಕೆಗಳು ಎಂದು ಕರೆಯುತ್ತಾರೆ. ಇದು ತಪ್ಪು ಕಲ್ಪನೆ ಜನಪದ ನಂಬಿಕೆಗಳೂ (Belief) ಮೂಢನಂಬಿಕೆಗಳಿಗೂ (Superstition) ಸಾಕಷ್ಟು ವ್ಯತ್ಯಾಸವಿದೆ. ಜನಪದ ನಂಬಿಕೆ ಮತ್ತು ತಿಳುವಳಿಕೆಗಳಲ್ಲಿ ಒಬ್ಬ ವ್ಯಕ್ತಿಯು ತಿಳಿದುಕೊಂಡ ತಿಳುವಳಿಕೆ ತಪ್ಪು ಎನ್ನುವುದೇ ವಿನಹ ಅವನ ನಂಬಿಕೆ ತಪ್ಪೆನ್ನಲಾಗದು.

ಮಾನವ ಶಾಸ್ತ್ರಜ್ಞರ ಪ್ರಕಾರ ನಂಬಿಕೆಯೂ ಕೂಡ ಒಂದು ವಿಧವಾದ ಮೊದಲ ಮಾನಸಿಕ ಅನುಭವ. ಹುಟ್ಟಿನಲ್ಲಿ ಜನಪದ ನಂಬಿಕೆಯಲ್ಲಿ ಆಯಾಕಾಲ ವೈಜ್ಞಾನಿಕ ಸತ್ಯ ಸಂಗತಿ ಅಡಕವಾಗಿದೆ. ಮಾನವ ತನ್ನ ಜೀವನದ ಉಳಿವಿಗಾಗಿ `ದೇವರಲ್ಲಿ ನಂಬಿಕೆಯನ್ನು ಬಲವನ್ನು ಹೊಂದಿದ್ದಾನೆ. ಇಂತಹುದರಲ್ಲಿ ಶ್ರೀ ಸುಂಕೇಮುಳಿ ಭೈರವನಿಗೊಳಪಟ್ಟ ಜನಪದ ಭಕ್ತಾದಿಗಳು ತಮ್ಮದೇ ಆದ ನಂಬಿಕೆಗಳನ್ನು ಉಳಿಸಿ ಬೆಳೆಸಿದ್ದಾರೆ.

- ರೈತರು ಬಿತ್ತುವಾಗ, ಮೊದಲ ಬೇಸಾಯವನ್ನು ಆರಂಭಿಸುವಾಗ ಸುಂಕಪ್ಪನ ಗುಡ್ಡದ ಕಡೆಗೆ ಕೈಮುಗಿದು ಕಾಯಿಯನ್ನು ಒಡೆಸುವ ಪದ್ಧತಿಯಿದೆ. ಹೀಗೆ ಮಾಡುವುದರಿಂದ ಬೆಳೆಯು ಹುಲುಸಾಗಿ ಬರುವುದೆಂಬ ನಂಬುಗೆಬಿಕೆ ಇದೆ.

- ಪರದೇಶಿಯ ಹತ್ತಿರ ವಿರುವ ದಾರವನ್ನು ಮಂತ್ರಿಸಿ ಹನ್ನೆರಡು ಗಂಟು ಹಾಕಿ ಗೋರಕ್ಷಕನಾಥನ ಮಂತ್ರವನ್ನು ಪಠಿಸಿ ಕಟ್ಟಿಸಿಕೊಂಡರೆ ಪೀಡೆ, ಪಿಶಾಚಿ ತೊಲಗಿ ಒಳ್ಳೆಯದಾಗುವುದು.

- ಮಲ್ಲಿಕಾರ್ಜುನನ ದೇವಾಲಯದ ಹಿಂದೆ ಹುಟ್ಟು ಬಂಡೆಯ ಮೇಲಿರುವ ಶಾಸನಗಳನ್ನು ಓದಿದರೆ ಮಲ್ಲಿಕಾರ್ಜುನನ ಮೂರ್ತಿಯ ಕೆಳಗೆ ಗುಪ್ತಸಿದ್ಧಿಯು ಸಿಗುವುದೆನ್ನುವುದು ಅಥವಾ ಅದನ್ನು ಓದಿದರೆ ತಲೆಯು ಸಾವಿರ ಹೋಳಾಗುವುದೆಂದು ನಂಬಿದ್ದಾರೆ.

- ಸುಂಕೇಭೈರವನ ಹಾಗೂ ಕರ್ಪೂರದಮ್ಮ ಮತ್ತು ಗೋರಕ್ಷಕನಾಥನ ಗುಡಿಯಲ್ಲಿ ಹೂ ಕೇಳುವ ನಂಬಿಕೆಯಿದೆ. ಮೂರ್ತಿಗಳ ಬಲಭಾಗದಿಂದ ಹೂ ಕೆಳಕ್ಕೆ ಬಿದ್ದರೆ ಕಾರ್ಯ ಕೈಗೂಡುವುದೆಂದೂ, ಎಡಭಾಗದಿಂದ ಹೂ ಕೊಟ್ಟರೆ ಕಾರ್ಯ ಕೈ ಗೂಡುವುದಿಲ್ಲವೆಂದೂ ಹೀಗೆ ಭಕ್ತಾದಿಗಳು ನಂಬಿಕೆಯಿಂದ ಹೂ ಕೇಳುವ ಪದ್ಧತಿಯುಂಟು.

- ಜಾತ್ರೆಯ ಸಂದರ್ಭದಲ್ಲಿ ಹಾಗೂ ವಿಶೇಷ ದಿನಗಳಲ್ಲಿ ಹರಳಯ್ಯನ ಕಡೆಯವರಿಗೆ ಕೊಂಡಿದುಡ್ಡು ಎಂದು ನಮ್ಮ ಜನಪದರು ಹಣವನ್ನು ಕೊಡುತ್ತಾರೆ. ಹೀಗೆ ಕೊಡುವುದರಿಂದ ಮನೆಯಲ್ಲಿ ಹಾವು ಚೇಳುಗಳು ಬರುವುದಿಲ್ಲ ಎಂಬ ನಂಬಿಕೆಯಿಂದ ಹರಳಯ್ಯನಿಗೆ ಸಿಡಿಯಾಡಿದ ನಂತರ ಕೊಂಡಿ ದುಡ್ಡು ಎಂದು ಕೊಡುತ್ತಾರೆ. ಸಿಡಿಯ ದಿನದಂದು ಮಳೆಯ ಹನಿಗಳೇನಾದರೂ ಬಂದರೆ ವರ್ಷಪೂರ್ತಿಯಾಗಿ ಮಳೆ ಚೆನ್ನಾಗಿ ಬರುತ್ತದೆಯಂತೆ.

- ದಸರಾ ಹಬ್ಬದಲ್ಲಿ ಬನ್ನಿ ಮರದಡಿಯಲ್ಲಿ ಪೂಜಾರಿಗಳು ನಿಂತು ಪೂರ್ವದಿಕ್ಕಿನ ಕಡೆ ಬಿಲ್ಲು ಬಾಣಗಳನ್ನು ಹಮ್ಮು ಎಂದು ಮೂರು ಬಾರಿ ಬಾಣ ಬಿಡುತ್ತಾರೆ. ಮೊದಲಿಗೆ ಬಿಟ್ಟದ್ದು ಮುಂಗಾರಿ ಮಳೆಯಂತಲೂ ಮಧ್ಯ ಬಿಟ್ಟ ಬಾಣ ಮಧ್ಯದ ಮಳೆಗಳೆಂದೂ, ಕೊನೆಯಲ್ಲಿ ಬಿಟ್ಟ ಬಾಣ ಹಿಂಗಾರಿಯಂತಲೂ ಅವು ಎಷ್ಟೆಷ್ಟು ರಭಸವಾಗಿ ಹೋಗುವವೋ ಅಷ್ಟಷ್ಟು ಮಳೆಯೂ ಚೆನ್ನಾಗಿ ಬರುತ್ತದೆಯೆಂದು ಹೇಳುತ್ತಾರೆ.

- ವಾಲ್ಮೀಕಿ ಜನಾಂಗದವರು ಯುಗಾದಿ ಹಬ್ಬದಲ್ಲಿ ಯುಗಾದಿ ಬೇಟೆಗೆಂದು ಹೋಗುವಾಗ ಜೋಗಿಯ ದೇವಸ್ಥಾನದಲ್ಲಿ ಹೂ ಕೇಳುವ ಪದ್ಧತಿಯುಂಟು. ಯಾವ ಕಡೆ ಹೂ ಕೆಳಕ್ಕೆ ಬೀಳುತ್ತದೆಯೋ ಆ ಕಡೆಗೆ ಬೇಟೆ ಮಾರ್ಗವಾಗಿ ಹೋಗಿ ಬೇಟೆಯಾಡುವ ಪದ್ಧತಿಯುಂಟು.

- ಸುತ್ತ - ಮುತ್ತಲಿನ ಭಕ್ತಾದಿಗಳು ಬಂದು ಎಲ್ಲಾ ದೇವಸ್ಥಾನಗಳಲ್ಲಿಯೂ ಸಹ ತೀರ್ಥವನ್ನು ಸಂಗ್ರಹಿಸಿಕೊಂಡು ಮನೆಗಳಲ್ಲಿ ಇಟ್ಟುಕೊಂಡಿರುತ್ತಾರೆ. ಮನೆಗಳಲ್ಲಿ ಯಾರಿಗಾದರೂ ಸಣ್ಣ - ಪುಟ್ಟ ರೋಗ ಬಂದರೆ ತೀರ್ಥವನ್ನು ಕುಡಿಸಿದರೆ ವಾಸಿಯಾಗುವುದೆಂದು ಹಾಗೂ ಹೊಲದಲ್ಲಿ ಪೈರುಗಳಿಗೆ ರೋಗವೇನಾದರೂ ಬಂದರೆ ಇದನ್ನು ಚೆಲ್ಲಿದರೆ ರೋಗ ಹೋಗಿ ಬೆಳೆಯು ಚೆನ್ನಾಗಿ ಬರುತ್ತದೆಯೆಂದೂ, ಹೇಳುತ್ತಾರೆ.

- ಹೊಲಗಳಲ್ಲಿ ಬೋರ್‌ವೆಲ್ ಕೊರೆಯಲು ಒಂದು ಜಾಗ ನೋಡಿ ಸ್ವಾಮಿಯ ಹತ್ತಿರ ಹೂ ಕೇಳುತ್ತಾರೆ. ಹೂ ಕೊಟ್ಟರೆ ಮಾತ್ರ ಆ ಜಾಗದಲ್ಲಿ ಬೋರ್‌ವೆಲ್‌ನ್ನು ಹಾಕಿಸುತ್ತಾರೆ. ಇಲ್ಲವಾದರೆ ಬೇರೆ ಜಾಗ ನೋಡುತ್ತಾರೆ.

- ಈ ಕ್ಷೇತ್ರದ ಹೊರಗಡೆಯ ಬೆಟ್ಟದಡಿಯಲ್ಲಿ ಒಂದು ಆಲದ ಮರದ ಕೆಳಗಡೆ ಉಣ್ಣೆಯ ಬಸಪ್ಪನೆಂದು ಕರೆಯುವರು. ದನಗಳಿಗೆ ಉಣ್ಣೆ ಬಿದ್ದರೆ ಹೋಳಿಗೆ ಎಡೆ ಹಾಕಿದರೆ ಉಣ್ಣೆಯು ಹೋಗುವದೆಂಬ ನಂಬಿಕೆಯಿಂದ ಎಡೆಯನ್ನು ಹಾಕುವ ಪದ್ಧತಿಯುಂಟು.

## ''ಹರಕೆಗಳು''

ತಮಗೆ ರಕ್ಷಣೆ ನೀಡುವ ದೇವರಿಗಾಗಿ ಭಕ್ತರು ಏನೆಲ್ಲಾ ತ್ಯಾಗ ಮಾಡಲು ಸಿದ್ಧರಾಗಿರುತ್ತಾರೆ. ಹರಕೆ ಹೊತ್ತವರು ಆರ್ಥಿಕವಾಗಿ ಎಷ್ಟೇ ಕಷ್ಟ ಬಂದರೂ ಸಹ ಕೂಲಿ ನಾಲಿ ಮಾಡಿಯಾದರೂ ದೇವರಿಗೆ ಹರಕೆ ತೀರಿಸುತ್ತಾರೆ. ತೀರಿಸದಿದ್ದರೆ ತಮಗೆ ಇನ್ನಷ್ಟು ಕಷ್ಠ ಪ್ರಾಪ್ತಿವಾಗುತ್ತದೆಯೆಂದು ಮಾನಸಿಕ ಭಯ ಇವರನ್ನು ಆವರಿಸುವುದು.

ಹರಕೆಗಳನ್ನು ಹೆಚ್ಚಿನದಾಗಿ ವಸ್ತುವಿನ ರೂಪದಲ್ಲಿ ತೀರಿಸುತ್ತಾರೆ. ಅವು ಈ ರೀತಿಯಲ್ಲಿವೆ.

- ಜಾತ್ರೆಯ ಸಂದರ್ಭದಲ್ಲಿ ಬೇವಿನ ಸೀರೆ ಉಡುವುದು ಬಾಯಿಗೆ ಬೀಗ ಹಾಕುವುದು.
- ಗಂಡು ಮಗುವಾದರೆ ನುಂಕಪ್ಪ, ಸಿದ್ದಣ್ಣ, ಭೈರೇಶ್ ಎಂದು ನಾಮಕರಣ ಮಾಡುವುದು.
- ವಾಲ್ಮೀಕಿ ಜನಾಂಗದವರು ''ಸಿದ್ದು ಬುಕ್ತಿ'' ಎಂದು ಬೇಟೆಗಳನ್ನು ಕೊಯ್ದು ತಮ್ಮ ಹರಕೆ ತೀರಿಸುವುದು.
- ಮಕ್ಕಳಾದರೆ ಕಲ್ಯಾಣ ಮಂಟಪ ಕಟ್ಟಿಸುವುದು ಮಗುವಿನಡ್ಡು ಬಾಳೇ ಹಣ್ಣಿನ ತೂಕ ಕೊಡುವುದು, ಬೆಲ್ಲವನ್ನು ತೂಕ ಕೊಡುವುದು.
- ಬೆಳ್ಳಿ - ಬಂಗಾರದ ಸಾಮಾನುಗಳನ್ನು ಮಾಡಿಸುವುದು.
- ತ್ರಿಶೂಲಗಳನ್ನು ಕತ್ತಿ, ಗುದ್ದುಬಾಕು, ಡಮರುಗ, ಕಪಾಲ ಹಾಗೂ ನುಂಕಪ್ಪ - ಮಲಿಯಪ್ಪನ ವಿಗ್ರಹಗಳನ್ನು ಮಾಡಿಸುವುದು.
- ಕರ್ಪೂರದಮ್ಮನಿಗೆ ಎಲೆ ಪೂಜೆ ಕಟ್ಟಿಸುವುದು.

- [illegible] ಕೊಡುವುದು.
- ತೇರನ್ನು ರಿಪೇರಿ ಮಾಡಿಸುವುದು.
- ಕೊಂಡಿದುಡ್ಡು ಕೊಡುವುದು.
- ಬರಿಗಾಲಿನಲ್ಲಿ ಹಾಲು, ತುಪ್ಪ ಮೀಸಲು ಒಯ್ಯುವುದು.
- ಕುಂಬಾರರು ಜಾತ್ರೆಯಲ್ಲಿ ಮಣ್ಣಿನ ದೀಪ ಮಡಿಕೆಗಳನ್ನು ಕೊಡುವುದು.
- ಹಾಲು - ತುಪ್ಪದಿಂದ ಅಭಿಷೇಕ ಮಾಡಿಸಿ ೧೦೧ ಪೂಜೆಮಾಡಿಸುವುದು.
- ಭಾನುವಾರ ದಿನದಂದು ಒಪ್ಪತ್ತಿರುವುದು.
- ಉತ್ಸವ ಮೂರ್ತಿಯು ಮೊಳಕಾಲ್ಮುರಿಗೆ ಹೋಗುವಾಗ ಪಲ್ಲಕ್ಕಿ ಹೊರುವುದು.

## "ನಿಷೇಧಗಳು"

- ಬೇರೆ ಮನೆಗೆ ಮದುವೆ ಮಾಡಿಕೊಟ್ಟ ಹೆಣ್ಣು ಮಗಳು ಭೈರವನ ದರ್ಶನ ಪಡೆಯುವಂತಿಲ್ಲ.
- ಗೋರಕ್ಷಕನಾಥನಿಗೆ ಮಾಂಸದ ಎಡೆ ಹಾಗೂ ಬ್ರಾಂದಿ ಭಂಗಿತಪ್ಪಲು ಎಡೆಹಾಕಬಹುದು. ಆದರೆ ಇತರೆ ದೇವರುಗಳಿಗೆ ಇದು ಸಲ್ಲುವಂತಿಲ್ಲ.
- ಈ ಕ್ಷೇತ್ರಕ್ಕೆ ಕಾಗೆ ಇಳಿಯುವಂತಿಲ್ಲ.
- ಪೂಜಾರಿಗಳು ವಾರದ ಭಾನುವಾರದ ದಿನ ಹೆಣ್ಣಿನ ಸ್ಪರ್ಶ ಮಾಡುವಂತಿಲ್ಲ.
- ಹಾಲು, ತುಪ್ಪ, ಮೀಸಲು, ತರುವಾಗ ಬರಿಗಾಲಿನಲ್ಲಿಯೇ ನಡೆದು ಬರಬೇಕು.

## ೪.೨ : '' ಆಚರಣೆಗಳು''

ತಲ ತಲಾಂತರದಿಂದ ಸಮುದಾಯದ ಅಂಗೀಕಾರವನ್ನು ಪಡೆದುಕೊಂಡು ಬಳಕೆಯಲ್ಲಿರುವ ಧಾರ್ಮಿಕ ವಿಧಿ ವಿಧಾನಗಳು ಜನಪದ ಆಚರಣೆಗಳಾಗಿವೆ. ಇಂತಹವುಗಳು ದೈವಕ್ಕೆ ಸಂಬಂದಿಸಿದ್ದು ತೀವ್ರವಾಗಿ ಬೆಳಕಿಗೆ ಬರುವುದನ್ನು ಗಮನಿಸಬಹುದು.

ಮಾನವನ ಮನಸ್ಸು ಪಕ್ವಗೊಂಡ ಮೇಲೆ ಧಾರ್ಮಿಕ ಭಾವನೆಗಳು ರೂಪಗೊಂಡವೆಂದು ಹೇಳಬಹುದು. ಇದರಿಂದ ಪ್ರಕೃತಿಯ ಅಗೋಚರ ಶಕ್ತಿಯನ್ನು ಆರಾಧಿಸುತ್ತ ಬಂದು ಕಲ್ಲು ಮರಗಳಲ್ಲಿ ದೈವದ ಅಂಶವನ್ನು ಕಂಡುಕೊಂಡ. ಅಂದಿನಿಂದ ಇಂದಿನವರೆಗೂ ಮನುಷ್ಯತಿಳಿದೋ ತಿಳಿದೆಯೋ ಹಲವಾರು ಆಚರಣೆಗಳನ್ನು ಮಾಡುತ್ತಾ ಬಂದಿದ್ದಾನೆ. ಇಂತಹ ಆಚರಣೆಗಳು ವೈಯಕ್ತಿಕತೆಗಿಂತ ಸಮಾಜದ ಹಿತರಕ್ಷಣೆಯೇ ಇವುಗಳ ಬಹು ಮುಖ್ಯ ಉದ್ದೇಶ. ಈ ಆಚರಣೆಗಳೆಲ್ಲಾ ಹುಟ್ಟಿ ಕೊಂಡಿರುವುದು ಬದುಕಿನಿಂದ ಸ್ವಲ್ಪ ವಿರಾಮ ಪಡೆದು ಒಂದು ದಿನವಾದರೂ ಸಂತೋಷದ ಜೀವನ ನಡಿಸಬೇಕೆನ್ನುವುದಾಗಿದೆ.

ಮಾನವ ತನ್ನ ಬೆಳವಣಿಗೆಯ ಆರಂಭದ ದಿನಗಳಲ್ಲಿ ನಡೆಸುತ್ತಿದ್ದ ಆಚರಣೆ ಪದ್ಧತಿಗಳಿಗೆಲ್ಲಾ ಧಾರ್ಮಿಕ ಭಾವನೆಯೇ ಪ್ರೇರಕವಾದ ಹಿನ್ನೆಲೆಯಾಗಿದೆ. ಜನತೆಯ ಬದುಕಿನ ಭಾಗವಾಗಿ ನಡೆಯುವ ಪ್ರತಿ ಆಚರಣೆಗಳಲ್ಲೂ ಇಂಥಹ ಧಾರ್ಮಿಕ ಭಾವನೆಗಳನ್ನು ಕಾಣುತ್ತೇವೆ.

ಸಾಮಾನ್ಯವಾಗಿ ವರ್ಷಕ್ಕೊಂದು ಸಾರಿ ವಿಶೇಷ ಸಂದರ್ಭಗಳಲ್ಲಿ ಆಚರಿಸುವ ಸಂಪ್ರದಾಯ ಆಚರಣೆಗಳನ್ನು ಒಳಗೊಂಡ ಸಂಕೀರ್ಣ ಸ್ವರೂಪವನ್ನೇ ಹಬ್ಬ ಎಂದು ಕರೆಯಬಹುದು. ಒಬ್ಬ ವ್ಯಕ್ತಿ ತನಗೆ ಬೇಕೆಂದಾಗ ಒಂದು ಆಚರಣೆಯನ್ನು ಸೃಷ್ಟಿಸಲು ಸಾಧ್ಯವಿಲ್ಲ. ಒಂದು ಜನಾಂಗದ ಅಥವಾ ಹಲವು ಜನಾಂಗದ ಜೀವನದ ಬೇಡಿಕೆಯ ಅಂಗವಾಗಿ ಆಚರಣೆ ರೂಪ ಪಡೆಯುತ್ತದೆ. ಆದ್ದರಿಂದಲೇ ಅದು ಬಹುಕಾಲ ಬಾಳುತ್ತದೆ.

ಆಚರಣೆಗಳನ್ನು ಆಚರಿಸದಿದ್ದರೆ ಕಂಟಕಗಳು ಆರಂಭವಾಗುತ್ತವೆ ಎಂಬ ನಂಬಿಕೆ ಜನರನ್ನು ಆವರಿಸಿರುತ್ತದೆ. ಆದ್ದರಿಂದ ಇವುಗಳನ್ನು ನಿಲ್ಲಿಸುವ ಪ್ರಶ್ನೆಯೇ ಹುಟ್ಟುವುದಿಲ್ಲ. ಒಟ್ಟಾರೆಯಾಗಿ ಎಲ್ಲಾ ಹಬ್ಬ ಉತ್ಸವಗಳು ನಮ್ಮಲ್ಲಿ ಉತ್ಸಾಹ ತುಂಬಿ ಹಳೆಯ ನೋವು ಮರೆಸಿ ಬಾಂಧವ್ಯದ ಕೊಂಡಿ ಕಳಚದ ಹಾಗೆ ಮಾಡಿ ಸಾಮುದಾಯಕ ಮನರಂಜನೆ, ದೈವಭಕ್ತಿ ಭಾವೈಕ್ಯತೆ, ಮನಶ್ಯಾಂತಿ ಉಂಟುಮಾಡಿ ಜೀವನಕ್ಕೆ ನವೋತ್ಸಾಹವು ಈ ಆಚರಣೆಗಳಿಂದ ದೊರೆಯುತ್ತದೆ.

ಜನಪದ ಸಂಸ್ಕೃತಿಗೆ ಆಚರಣೆಯೇ ಬೆನ್ನೆಲುಬು. ಆಚರಣೆಯಿಲ್ಲದೆ ಯಾವ ದೈವದ ಅಸ್ತಿತ್ವವೂ ಸಾಧ್ಯವಿಲ್ಲ. ಜನಪದ ಧರ್ಮ ಒಂದು ಬಗೆಯಲ್ಲಿ ಆಚರಣೆಯ ಧರ್ಮ ಎನ್ನಬಹುದು. ಆಚರಣೆಯು ನಿರ್ದಿಷ್ಠ ಕಾಲದಲ್ಲಿ ನಿರ್ದಿಷ್ಠ ವ್ಯಕ್ತಿಯಿಂದಲೇ ಆಗಬೇಕಾದುದು ದೇವರಿಗೂ ಸಮಾಜಕ್ಕೂ ಇರುವ ಸಂಬಂಧ ಅಭಿನಯಗೊಳ್ಳುವ ಕ್ರಮ ವಿವರಗಳೇ ಆಚರಣೆಗಳು. ಆದ್ದರಿಂದ ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆಗಳಾಗಿವೆ.

ನಂಬಿಕೆ ಆಚರಣೆಯ ಬೆನ್ನೆಲುಬು. ಈ ನಂಬಿಕೆಯು ಸಿದ್ಧಾಂತವು ಆಚರಣೆಯನ್ನು ಮುಂದುವರಿಸಿಕೊಂಡು ಹೋಗುವಂತೆ ಮಾಡುತ್ತದೆ. ಇಂತಹ ಆಚರಣೆ ಹುಟ್ಟುವ ಮುನ್ನ ಅಥವಾ ನಂತರ ಪುರಾಣಗಳು ಹುಟ್ಟಿಕೊಳ್ಳುತ್ತವೆ. ಪುರಾಣ ಮರೆತು ಹೋದ ಸಂದರ್ಭದಲ್ಲೂ ಯಾವುದೇ ಆತಂಕವಿಲ್ಲದೆ ಆಚರಣೆಗಳು ಮುಂದುವರೆಯುತ್ತಾ ಹೋಗುವುದನ್ನು ಕಾಣಬಹುದು. ಸಂಪ್ರದಾಯ, ಹಬ್ಬ, ಆಚರಣೆ ಈ ಮೂರಕ್ಕೂ ನಂಬಿಕೆಯೇ ಜೀವಧಾತು. ಅಂತಹ ಪುರಾಣ ಮತ್ತು ಆಚರಣೆಗಳು ದೈವದ ಅಧ್ಯಯನದಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ.

ಹೀಗೆ ಒಂದು ವರ್ಷದ ಅವಧಿಯಲ್ಲಿ ಆಚರಿಸುವ ಪ್ರಮುಖ ಆಚರಣೆಗಳನ್ನು ವಾರ್ಷಿಕಾವರ್ತನದ ಆಚರಣೆಗಳೆಂದೂ ಕರೆಯುವರು. ಮಾನವ ಜನನವಾದಾಗಿನಿಂದ ಹಿಡಿದು ಸಾಯುವವರೆಗೂ ಮಾಡುವ ಆಚರಣೆಗಳನ್ನು ಜೀವನಾವರ್ತನ ಆಚರಣೆಗಳೆಂದೂ ಕರೆಯುವರು. ಇಂತಹ ಆಚರಣಾತ್ಮಕ ನೆಲೆಗಳಲ್ಲಿ ಶ್ರೀ ನುಂಕೇಮಲೆಭೈರವನ ಕ್ಷೇತ್ರದಲ್ಲಿ ಸುತ್ತ ಮೂವತ್ಮೂರು ಹಳ್ಳಿಗರೂ ಸೇರಿದಂತೆ ವೀರಶೈವರೂ, ವಾಲ್ಮೀಕಿಗಳು, ಗೊರವರೂ (ಹರಿಜನ), ಗೊಲ್ಲರೂ ಕುರುಬರೂ, ಕುಂಬಾರರು, ಬಡಗಿಗಳೂ ಹಲವಾರು ಜನಸಮುದಾಯದವರೂ ಭಾಗವಹಿಸುತ್ತಾರೆ.

ಆಚರಣೆಗಳನ್ನು ಎರಡು ರೀತಿಯಲ್ಲಿ ವರ್ಗೀಕರಿಸುತ್ತಾರೆ :

೧) ವಾರ್ಷಿಕಾವತನದ ಆಚರಣೆಗಳು ೨) ಜೀವನಾವರ್ತನದ ಆಚರಣೆಗಳು.

**೪.೨.೧ : ವಾರ್ಷಿಕಾವರ್ತನದ ಆಚರಣೆಗಳು :** ಯುಗಾದಿಯಿಂದ ಯುಗಾದಿಯವರೆಗೆ ನಡೆಯುವ ಹಬ್ಬ, ಜಾತ್ರೆ, ಹುಣ್ಣಿಮೆ, ಅಮವಾಸೆ ಮುಂತಾದವುಗಳನ್ನು ವಾರ್ಷಿಕಾವರ್ತನದ ಆಚರಣೆಗಳು ಎನ್ನುವರು.

**''ಯುಗಾದಿ''** : ಹಳೆಯ ಮತ್ತು ಹೊಸವರ್ಷವನ್ನು ಜೋಡಿಸುವ ಸುವರ್ಣ ಸೇತುವೆಯೇ ಯುಗಾದಿ. ಪಾಲ್ಗುಣ ಬಹುಳ ಅಮವಾಸ್ಯೆಯ ದಿನ ಹಳೆಯ ವರ್ಷಕ್ಕೆ ವಿದಾಯ ಹೇಳಿ ಮರುದಿನ ಚೈತ್ರ ಶುಕ್ಲ ಪಕ್ಷ ಪ್ರತಿ ಪದೆಯಂದು ಹೊಸವರ್ಷವನ್ನು ಸ್ವಾಗತಿಸುವುದೇ ಯುಗಾದಿ. ಹಿಂದಿನ ವರ್ಷವೆಂಬುದು ಕಾಲಪುರುಷನ ಮರಣ ಮತ್ತು ಹೊಸವರ್ಷದ ರೂಪದ ಶಿಶುವಿನ ಜನನ ಸೂಚಕಗಳಾಗಿವೆ. ಚೈತ್ರಮಾಸದಿಂದ ಹೊಸವರ್ಷದ ಗಣನೆ ಪ್ರಾರಂಭವಾಗುವುದೆಂದು ಬಲ್ಲವರ ಅಭಿಪ್ರಾಯ.

ಯುಗಾದಿ ಎಂದ ಕೂಡಲೇ ನಮಗೆ ನೆನಪಿಗೆ ಬರುವುದು ಬೇವು ಬೆಲ್ಲ. ಬೇವಿನ ಚಿಗುರಿನ ಕಹಿ, ಬೆಲ್ಲದ ಸಿಹಿ. ಇವೆರಡೂ ಬದುಕಿನ ಪ್ರತೀಕ. ನೋವು ನಲಿವುಗಳ ಸಂಕೇತವಾಗಿದೆ. ಆಯುರ್ವೇದದ ಪ್ರಕಾರ ವಸಂತಕಾಲದಲ್ಲಿ ತಲೆದೋರುವ ಶಾರೀರಕ ರೋಗ ರುಜಿನುಗಳಿಗೆ ಬೇವು ಒಳ್ಳೆಯ ಔಷಧವಂತೆ. ಇಂತಹ ಶ್ರೇಷ್ಠವಾದ ಹಬ್ಬವನ್ನು ನುಂಕೇಮಲೆ ಭೈರವನ ಕ್ಷೇತ್ರದಲ್ಲಿಯೂ ಸಹ ಆಚರಿಸಲಾಗುವುದು.

ಯುಗಾದಿಯಲ್ಲಿ ಭೈರವ ಸ್ವಾಮಿಗೆ ಇತರ ಮೂರ್ತಿಗಳಿಗೆ ವಿಶೇಷವಾಗಿ ಎಣ್ಣೆ ಪೂಜೆಯನ್ನು, ಅಭಿಷೇಕವನ್ನು ಮಾಡಲಾಗುತ್ತದೆ. ಮೊದಲನೆಯ ದಿನ ನಿತ್ಯ ಪೂಜೆ ನಡೆಯುತ್ತದೆ. ಯುಗಾದಿಯ ಸಂಪ್ರದಾಯದಂತೆ ಬೇವು ಬೆಲ್ಲದ ಮಿಶ್ರಣದಿಂದ ಮಾಡಿದ ಸಿಹಿಯನ್ನು ಬಂದ ಭಕ್ತಾದಿಗಳಿಗೆಲ್ಲಾ ಹಂಚಲಾಗುತ್ತದೆ.

ಹೀಗೆ ಹಿಂದೂ ಧರ್ಮದ ಪ್ರಕಾರ ಮೊಸರನ್ನದ ಆಚರಣೆಯ ಮೂಲಕ ಆಚರಣೆಯನ್ನು ಮಾಡಲಾಗುತ್ತದೆ. ಭಕ್ತಾದಿಗಳೂ ಸಹ ಮನೆಯಲ್ಲಿ ಮಾಡಿದ ಜೇವ್ರ ಬೆಲ್ಲದ ಮಿಶ್ರಣವನ್ನು ತಂದು ಸ್ವಾಮಿಗೆ ಎಡೆ ಹಾಕುತ್ತಾರೆ. ಎರಡನೆಯ ದಿನವೂ ಸಹ ಭಕ್ತರು ಬಂದು ಹೋಗುತ್ತಾರೆ.

ಮುಖ್ಯವಾಗಿ ವಾಲ್ಮೀಕಿ ಜನರು (ಕಾವಲುಗಾರರು) ಯುಗಾದಿ ಬೇಟೆಗಾಗಿ ಹೋಗುವಾಗ ಜೋಗಿಯ ಮಠದಲ್ಲಿಯೂ ಹಾಗೂ ಕರ್ಪೂರದಮ್ಮನ ಗುಡಿಗಳಲ್ಲಿಯೂ ಸಹ ಹೂ ಕೇಳುವ ಸಂಪ್ರದಾಯವಿದೆ. ಹೂವು ಯಾವ ಕಡೆ ಬೀಳುತ್ತದೆಯೋ ಆ ಕಡೆಗೆ ಬೇಟೆಗೆ ಹೊರಡುತ್ತಾರೆ. ಬೇಟೆಗೆ ಹೋಗಿ ಮನೆಗೆ ಬಂದಾಗ ಅವರಿಗೆ ಅಕ್ಕ ತಂಗಿಯರಾದವರೂ, ಸೊಸೆಯಂದಿರೂ ಆರತಿ ಎತ್ತುವರು ಹೀಗೆ ಆರತಿ ಎತ್ತುವುದರಿಂದ ಗ್ರಹಗಳೂ ಪಿಶಾಚಿಗಳು ತೊಲಗ ಬೇಕೆಂಬಂತಲೂ ವಿಜಯದ ಸಾಂಕೇತಿಕವಾಗಿಯೂ ಊರಿನ ಹೆಣ್ಣು ಮಕ್ಕಳು ಆರತಿ ಬೆಳಗುವುದುಂಟು.

## ''ಜಾತ್ರೆ''

''ಯಾವುದೋ ಒಂದು ನಿಗದಿತವಾದ ವೇಳೆಯಲ್ಲಿ ಜನರೆಲ್ಲಾ ಸೇರಿ ದೇವರನ್ನು ಆರಾಧಿಸುವುದು''. ಜಾತ್ರೆಯೆಂಬುದು ವರ್ಷಕ್ಕೊಮ್ಮೆ ನಿಗದಿಯಾದ ಇನ್ನಿತರ ಅವಧಿಗೂ ಗೊತ್ತಾದ ಸ್ಥಳದಲ್ಲಿ ಒಂದು ದಿನವೋ ಇನ್ನೂ ಹೆಚ್ಚಿನ ದಿನಗಳವರೆಗೂ ಜನ ಸೇರಿ ನಡೆಸುವ ಉತ್ಸವವಾಗಿದೆ (ಹಂಪನಾ ಕರ್ನಾಟಕ ಜಾತ್ರೆಗಳು ೬-೨೧). ಸಂಸ್ಕೃತದ ಯಾತ್ರೆಗೆ ಅನ್ವರ್ಥವಾಗಿ 'ಜಾತ್ರೆ' ಎಂಬ ಪದವು ಬಳಕೆಯಾಗಿದೆ. ಈ ಯಾತ್ರೆಗಾದರೂ ಪ್ರಯಾಣ, ತೀರ್ಥಯಾತ್ರೆ ಎಂಬಂತಹ ಹಲವಾರು ಅರ್ಥಗಳಿವೆ. ಜಾತ್ರೆಗೆ ಆರ್ಥಿಕ, ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಮುಖಗಳಿವೆ

**ಜಾತ್ರೆ** : ಯುಗಾದಿಯಾದ ಬರುವ ಮೂರನೇ ತಿಂಗಳ ಅವಮಾಸೆಯಾದ ಐದನೆಯ ದಿನಕ್ಕೆ ಎಲ್ಲಾ ದೇವರುಗಳಿಗೂ ಸಹ ಕಂಕಣಧಾರಣೆ ಮಾಡಲಾಗುತ್ತದೆ. ಹಾನಗಲ್ಲು, ಕೊಮ್ಮನಪಟ್ಟಿ, ಪೂಜಾರಿಹಟ್ಟಿ ಎಲ್ಲಾ ಸುತ್ತ ಮೂವತ್ಮೂರು ಹಳ್ಳಿಗರೂ ಸೇರಿ ಕಂಕಣಧಾರಣೆ ಮಾಡುತ್ತಾರೆ. ಇದು ಜಾತ್ರೆಯು ಆರಂಭಕ್ಕೆ ನಾಂದಿಯಿದ್ದಂತೆ.

**ಕಂಕಣಧಾರಣೆ** : ಮಠದ ಸ್ವಾಮಿಗಳನ್ನು ಆಚಾರಿಗಳನ್ನು ಕರೆಸಿ ಭೈರವ ಸ್ವಾಮಿಯನ್ನು ಹೊಂಡಕ್ಕೆ ತೆಗೆದುಕೊಂಡು ಹೋಗಿ ಗಂಗೆ ಪೂಜೆ ಮಾಡಿಕೊಂಡು ಬಂದು ಎಲ್ಲಾ ದೇವರಿಗೂ ಕಂಕಣ ಕಟ್ಟಲಾಗುತ್ತದೆ. ಈ ಕಾರ್ಯವು ಜಾತ್ರೆಗೆ ಮುನ್ಸೂಚನೆಗೆ ಸಾಂಕೇತಿಕವಾಗಿ ನಡೆಯುತ್ತದೆ. ಈ ಸಂದರ್ಭದಲ್ಲಿ ಹರಳಯ್ಯನಿಗೂ, ಮಲ್ಲಿಕಾರ್ಜುನನಿಗೂ, ಕರ್ಪೂರದಮ್ಮನಿಗೂ ಸಹ ಕಂಕಣಧಾರಣೆಯನ್ನು ಮಾಡುವ ಮೂಲಕ ಜಾತ್ರೆಯ ಶುಭಾರಂಭವನ್ನು ಮಾಡಲಾಗುತ್ತದೆ.

ಭೈರವನನ್ನು, ಗೋರಕ್ಷನಾಥನನ್ನು ತೆಗೆದುಕೊಂಡು ಮಲ್ಲಿಕಾರ್ಜುನನ ದೇವಾಲಯಕ್ಕೆ ಹೋಗಿ ದರ್ಶನ ಮಾಡಿಕೊಂಡು ಬರುವ ಸಂಪ್ರದಾಯವಿದೆ. ಇದು ತನ್ನ ತಂದೆಯ ಹತ್ತಿರ ಜಾತ್ರೆಗೆ ಅಪ್ಪಣೆಯನ್ನು ಪಡೆದಂತೆ ಹೀಗೆ ಪೂಜೆ ಮಾಡಿಕೊಂಡು ಹೋಗಿ ಗುಡಿ ತುಂಬಿಸುತ್ತಾರೆ. ಇಲ್ಲಿಗೆ ಜಾತ್ರೆಯ ಮೊದಲನೆಯದಿನ ಮುಗಿಯುತ್ತದೆ.

**ಜಾತ್ರೆಯ ಎರಡನೆಯ ದಿನ :** ಕಂಕಣಧಾರಣೆಯಾದ ಮೊದಲದಿನದಿಂದ ಏಳಿದು. ತೇರು ಎಳೆಯುವ ಐದುದಿನಗಳವರೆಗೂ ಹರಳಯ್ಯನನ್ನು ಮತ್ತು ಕಾಲಭೈರವನನ್ನು ತುಪ್ಪದಮ್ಮನನ್ನು ಮಲ್ಲಿಕಾರ್ಜುನನ ದೇವಾಲಯಕ್ಕೆ ಕರೆತಂದು ದರ್ಶನ ಮಾಡಿ ಕೊಂಡು ಹೋಗುವ ಸಂಪ್ರದಾಯವುಂಟು. ಇದರಲ್ಲಿ ಪೂಜಾರಿಗಳು ಹರಳಯ್ಯನವರೂ, ಕಾವಲರು (ವಾಲ್ಮೀಕಿ), ಅಗಸರು ಭಾಗವಹಿಸುತ್ತಾರೆ. ಕುಂಬಾರರು ಪ್ರತಿವರ್ಷದಂತೆ ಮಣ್ಣಿನಿಂದ ತಯಾರಿಸಿದ ಐದು ಹೊಸ ಕೊಡ, ಐದು ಹೊಸ ಮಗಿ ಇವುಗಳನ್ನು ತಂದು ಕೊಡುತ್ತಾರೆ ಇದಕ್ಕೆ 'ಹರಣೆ' ತರುವುದು ಎನ್ನುತ್ತಾರೆ. ಆಗ ಪೂಜಾರಿಗಳು ಅಕ್ಕಿ, ಬೇಳೆ, ಬೆಲ್ಲ ಮತ್ತು ದಕ್ಷಿಣೆಯನ್ನು ಕುಂಬಾರರಿಗೆ ಕೊಟ್ಟು ಕಳಿಸಿ ಜಾತ್ರೆಯಲ್ಲಿ ಅವುಗಳನ್ನು ಬಳಸಿಕೊಳ್ಳುತ್ತಾರೆ. ಮೊದಲೆಲ್ಲಾ ಭೈರವನು ದರ್ಶನ ಪಡೆಯಲು ಮಲ್ಲಿಕಾರ್ಜುನ ದೇವಾಲಯಕ್ಕೆ ಬರುವಾಗ 'ಉಚ್ಚಾಯ' ಎಂದು ಎಳೆಯುತ್ತಿದ್ದರು. ಆದರೆ ಈ ಸಂಪ್ರದಾಯ ಈಗ ನಿಂತು ಹೋಗಿದೆ. ಈಗ ಜನರಿದ್ದರೆ ಪಲ್ಲಕ್ಕಿಯಲ್ಲಿ ತರುತ್ತಾರೆ. ಇಲ್ಲವಾದರೆ ಪೂಜಾರುಗಳೇ ಹೊತ್ತು ತರುತ್ತಾರೆ.

ನಂತರ ಜಾತ್ರೆಯಲ್ಲಿ ತೇರು ಹರಿಯುವುದು ಮುಖ್ಯ ಕಾರ್ಯಕ್ರಮವಾಗಿರುತ್ತದೆ. ಮರುದಿನ ಬೆಳಿಗ್ಗೆ ದೇವರಿಗೆ ಹೊಂಡದಲ್ಲಿ ಸ್ನಾನಮಾಡಿಸಿ ಬೆಳ್ಳಿ-ಬಂಗಾರದ ಒಡವೆಗಳನ್ನು ಏರಿಸಿ ಶೃಂಗರಿಸುತ್ತಾರೆ. ಆಗ ಗುಡಿಗಳಲ್ಲಿ ವಿಶೇಷವಾದ ಪೂಜೆ ನಡೆಯುತ್ತದೆ. ಈಗಾಗಲೇ ಭಕ್ತಾದಿಗಳು ರಥೋತ್ಸವದ ಕಾರ್ಯಕ್ರಮಕ್ಕಾಗಿ ಆಗಮಿಸತೊಡಗುತ್ತಾರೆ. ಇತ್ತೀಚಿನ ಆಧುನಿಕತೆಯ ಪ್ರಭಾವದಿಂದ ಬಳೆ ಅಂಗಡಿಗಳು, ಕಾರಮಂಡಕ್ಕಿ ಅಂಗಡಿಗಳು, ಸಿಹಿ ತಿಂಡಿಗಳ ಅಂಗಡಿಗಳು, ಮಕ್ಕಳ ಸಾಮಾನುಗಳ ಅಂಗಡಿಗಳನ್ನು ತೆರೆಯುವ ಮೂಲಕ ಜಾತ್ರೆಗೆ ಹೊಸ ಕಳೆಯನ್ನು ತರಲಾಗುತ್ತದೆ. ಬಂದ ಭಕ್ತರು ಮೊದಲು ಎಲ್ಲಾ ದೇವಸ್ಥಾನಗಳಿಗೂ ಹಣ್ಣು ಕಾಯಿ ಕರ್ಪೂರವನ್ನು ನೈವೇದ್ಯ ಮಾಡಿಕೊಳ್ಳುತ್ತಾರೆ.

ಈಗ ತೇರಿನ ಕಾರ್ಯಕ್ರಮ ನಡೆಯುತ್ತದೆ. ವಾಲ್ಮೀಕಿ ಜನಾಂಗದವರು ತೇರಿಗೆ ನೀರು ಹಾಕಿ ತೊಳೆಯುತ್ತಾರೆ. ಅದಕ್ಕೆ ಹರಳಯ್ಯನವರು ಎಣ್ಣೆಯನ್ನು ಎರೆಯುತ್ತಾರೆ. ಮುಡುಪು ಕಟ್ಟಿಕೊಂಡರೆಲ್ಲಾ ಈ ಸಂದರ್ಭದಲ್ಲಿ ಹರಿಜನರ ಕೈಗೆ ಮುಡುಪು ಎಂದು ಎಣ್ಣೆಯನ್ನು ಕೊಟ್ಟಾಗ ಅಗವರು ತೇರಿಗೆ ಎಣ್ಣೆಯನ್ನು ಹಾಕುತ್ತಾರೆ. ನಂತರ ಬಾಳೇ ಹಣ್ಣನ್ನು ತೇರಿನ ಗಾಲಿಗೆ ತಿಕ್ಕುತ್ತಾರೆ. ನಂತರ ಸ್ವಾಮಿಗೆ ಪೂಜೆ ಮಾಡಿಕೊಂಡು ಬರುತ್ತಾರೆ. ನಂತರ ಪೂಜಾರಿಗಳ ಮನೆಯಲ್ಲಿ ಕುಂಬಾರನು ಕೊಟ್ಟ ಹೊಸ ಗಡಿಗೆಯಲ್ಲಿ ' ಒಲೆಅನ್ನ' ಎಂದು ೯ ಸೇರು ಅಕ್ಕಿಹಾಕಿ ಮಾಡಿರುತ್ತಾರೆ. ಈ ಒಲೆ ಅನ್ನವನ್ನು ರಥದ ನಾಲ್ಕು ಚಕ್ರಗಳಿಗೂ ಹಾಕುತ್ತಾರೆ. ಆಲದ ಎಲೆಯಿಂದ ತಯಾರಿಸಿದ ಎಲೆಯ ಮೇಲೆ ಈ 'ಒಲೆಅನ್ನ' ವನ್ನು ಹಾಕಿ ಜೊತೆಗೆ ಹೂವಿಟ್ಟು ಪೂಜಿಸುತ್ತಾರೆ. ನಂತರ ಪೂಜಾರಿಗಳು ತೇರನ್ನು ತಯಾರಿಸಿದ ಆಚಾರಿಗಳೂ ಸಹ ತೇರಿಗೆ ಮೊದಲು ಪೂಜೆ ಮಾಡುತ್ತಾರೆ. ಆಚಾರಿಗಳೂ ಸಹ ತೇರಿಗೆ ಮೊದಲು ಪೂಜೆ ಮಾಡುತ್ತಾರೆ. ''ಕಾವಲುಗಾರರು'' ತೇರಿಗೆ ಮೊಸರನ್ನು ಎಡೆ ಹಾಕುತ್ತಾರೆ. ನಂತರ ಗ್ರಾಮಸ್ಥರು ತಮ್ಮ ಕಾಯಿಗಳನ್ನು ಇಟ್ಟು ತೇರಿಗೆ ಪೂಜಿಸುತ್ತಾರೆ.

ಅನಂತರ ದೇವಸ್ಥಾನದಲ್ಲಿರುವ ಕುದುರೆಯನ್ನು ತೆಗೆದುಕೊಂಡು ಕುದುರೆಯ ಮೇಲೆ ದೇವರನ್ನು ಕೂರಿಸಿಕೊಂಡು ಮೆರವಣಿಗೆ ಮಾಡುತ್ತಾ ಹೊಂಡದ ಹತ್ತಿರ ತರಲಾಗುತ್ತದೆ. ಗಂಗೆ ಪೂಜೆ ಮಾಡಿಕೊಂಡು ಹೋಗಿ ಪೂಜಾರಿಗಳೆಲ್ಲಾ ಸೇರಿ ತೇರಿನ ಮೇಲೆ ಇಡಲಾಗುತ್ತದೆ.

ನಂತರ ಪೂಜಾರಿಗಳು ದೇವಸ್ಥಾನಕ್ಕೆ ಮರಳಿ ಗೋರಕ್ಷಕನಾಥನನ್ನೂ ನುಂಕೇಮಲೆ ಸಿದ್ದೇಶ್ವರನ ದೇವಸ್ಥಾನಕ್ಕೆ ತರಲಾಗುತ್ತದೆ. ಅನಂತರ ಗೋರಕ್ಷಕನಾಥನಿಗೆ ಭೈರವನ ವಿಶೇಷವಾದ ಪೂಜೆ ಸಲ್ಲಿಸುತ್ತಾನೆ. ಈ ಸಂಪ್ರದಾಯದ ಪ್ರಕಾರ ಪ್ರತಿ ಭಾನುವಾರವೂ ಗೋರಕ್ಷಕನಾಥನಿಗೆ ನುಂಕೇಮಲೆ ಸಿದ್ದೇಶನು ಹೋಗಿ ಪೂಜೆ ಮಾಡಿಕೊಂಡು ಬರುತ್ತಾನೆ. ಏಕೆಂದರೆ ಭೈರವನಿಗೆ ಗೋರಕ್ಷಕನಾಥನು ಗುರುವಾಗಿರುತ್ತಾನೆ. ಇದೇ ಆಚರಣೆ ತೇರಿನಲ್ಲಿಯೂ ಸಹ ವಿಶೇಷವಾಗಿ ಮಾಡಲಾಗುತ್ತದೆ.

ಆಗ ಭಕ್ತಾದಿಗಳ ಸಮ್ಮುಖದಲ್ಲಿ ಪಲ್ಲಕ್ಕಿಯಲ್ಲಿ ತಂದು ತೇರಿನಲ್ಲಿ ದೇವರನ್ನು ಪ್ರತಿಷ್ಠಾಪಿಸುತ್ತಾರೆ. ಈ ಸಂದರ್ಭದಲ್ಲಿ ಭಕ್ತಾದಿಗಳು ಕಾಯಿಗಳನ್ನು ಗಾಲಿಗೆ ಹಾಕುತ್ತಾರೆ. ಆಯಾ ಗಾಲಿಗಳಿಗೆ ಬಿದ್ದ ಕಾಯಿಗಳನ್ನೂ ಮತ್ತು ಈ ಮುಂಚೆ ನಾಲ್ಕು ಗಾಲಿಗಳೂ ಹಾಕಿದ ಒಲೆ ಅನ್ನವನ್ನು ಒಂದು ಚಕ್ರದ ಹತ್ತಿವಿರುವುದನ್ನು ವಾಲ್ಮೀಕಿ ಜನಾಂಗದವರೂ ಇನ್ನೊಂದು ಚಕ್ರದ ಹತ್ತಿರವಿರುವುದನ್ನು ಗೊರವರೂ (ಹರಿಜನರು), ಮತ್ತೊಂದು ಚಕ್ರದ ಹತ್ತಿರ ವಿರುವುದನ್ನು ಅಗಸರೂ, ಕೊನೆಯ ಚಕ್ರದ ಹತ್ತಿರವಿರುವುದನ್ನು ಕುಂಬಾರರೂ ತೆಗೆದುಕೊಳ್ಳುತ್ತಾರೆ. ಇದರಿಂದ ಹಂಚಿಕೊಂಡು ತಿನ್ನುವ ಸಂದೇಶ ವ್ಯಕ್ತವಾಗುವುದು. ಆಗ ತೇರನ್ನು ಮೂಡಲ ದಿಕ್ಕಿಗೆ ಮೂರು ಬಾರಿ ಎಳೆಯಲಾಗುತ್ತದೆ. ಅನಂತರ ಪಡುವಣ ದಿಕ್ಕಿಗೆ ತೇರನ್ನು ಎಳೆಯುತ್ತಾರೆ. ಹೀಗೆ ಭಕ್ತಾದಿಗಳು ತೇರನ್ನು ಎಳೆಯುತ್ತಾ ಮಲ್ಲಿಕಾರ್ಜುನನ ದೇವಸ್ಥಾನಕ್ಕೆ ಎಳೆದು ತರುತ್ತಾರೆ. ಮಲ್ಲಿಕಾರ್ಜುನನಿಗೆ ಪೂಜೆ ಮಾಡಿದ ನಂತರ ತೇರನ್ನು ದೇವಸ್ಥಾನದ ಕಡೆಗೆ ಎಳೆದು 'ನೆಲೆ ನಿಲ್ಲಿಸಿ' ದೇವರನ್ನು ತೆಗೆದುಕೊಂಡು ಹೋಗಿ ದೇವಸ್ಥಾನದಲ್ಲಿ ಗುಡಿ ತುಂಬಿಸುತ್ತಾರೆ. ದೇವರು ಗುಡಿಬಾಗಿಲಿಗೆ ಹೋದಾಗ ಓಕಳಿಯನ್ನು ಚೆಲ್ಲಿ ಒಳಗಡೆ ಇಡುತ್ತಾರೆ. ಕೊನೆಯಲ್ಲಿ ಎಡೆಮಾಡಿದ ಅನ್ನವನ್ನು ಕಾಯಿಗಳನ್ನು ಗೊರವರಿಗೆ ಕೊಡಲಾಗುತ್ತದೆ ಇಲ್ಲಿಗೆ ತೇರು ಕೊನೆಗೊಳ್ಳುತ್ತದೆ.

## ಜಾತ್ರೆಯಲ್ಲಿ ಪ್ರದರ್ಶನಗೊಳ್ಳುವ ಪ್ರಮುಖ ಕಲೆಗಳು

೧. ಗುಂಪು ಗುಂಪಾಗಿ ಹಾಡುವ ಸೋಬಾನೆ ಪದಗಳು
೨. ಭಜನೆ ಮಾಡುವುದು
೩. ಕೋಲು ಹಾಕುವುದು.
೪. ನಂದಿಕೋಲು ಕುಣಿಸುವುದು
೫. 'ನುಂಕಪ್ಪನ ಕಥೆಯನ್ನು' ಬಯಲಾಟ ಆಡುವುದು.
೬. ಸಾಮಾಜಿಕ ನಾಟಕ ಮಾಡುವುದು.

## "ಸಿಡಿ"

"ಸಿಡಿ" ಎಂದರೆ ದೇವರಿಗೆ ಅಥವಾ ದೇವತೆಗೆ ಮಾಡುವ ಒಂದು ಸೇವೆಯೆಂದು ಅರ್ಥ ಬರುತ್ತದೆ. 'ಸಿಡಿ' ಎಂದರೆ ಏಣಿ. ಈ ಏಣಿ ಎನ್ನುವ ಅರ್ಥದಲ್ಲಿ ಅದನ್ನೇ ಪ್ರಯೋಗದಲ್ಲಿ 'ಸಿಡಿ' ಎಂದು ಸ್ವೀಕರಿಸಿದರೆ ಏರುವ ಒಂದು ಸಾಧನೆ ಎಂದರ್ಥವಾಗುತ್ತದೆ. ಆದ್ದರಿಂದ ಸಿಡಿ ಎಂದರೆ ಏಣಿಯನ್ನು ಹತ್ತಿ ಆಡುವ ಅಥವಾ ಪ್ರದಕ್ಷಣೆ ಮಾಡುವ ಸುತ್ತುಗಟ್ಟುವ ಒಂದು ಸೇವೆಯ ಪ್ರತಿರೂಪವೇ ಸಿಡಿ ಎಂದು ಕರೆಯಬಹುದಾಗಿದೆ. (ಹಂದಿಕೆರೆ ಮಾರಮ್ಮ - ಅಬ್ದುಲ್ - ೧೯೯೦ ಫೆಬ್ರವರಿ- ಲೇಖನ).

ಪೌರಾಣಿಕವಾಗಿ ಈ ಸಂದರ್ಭವನ್ನು ಬ್ರಾಹ್ಮಿಣಿತಿಯು ತನ್ನ ಗಂಡನನ್ನು ಬಲಿತೆಗೆದುಕೊಳ್ಳಲು ದೇವಿಯ (ಮಾರಿ) ಅವತಾರದಲ್ಲಿ ಪುನರ್ಜನ್ಮ ಪಡೆದು ಆತನನ್ನು ಅತ್ಯಧಿಕ ರೋಷದಲ್ಲಿ ತನ್ನ ಬೆರಳಿನ ಮೇಲೆ ಸಿಕ್ಕಿಸಿಕೊಂಡು ತಿರುವಿ ಸಾಯಿಸಿದಳೆಂಬ ಪ್ರತೀತಿಯಿದೆ. ನಮ್ಮ ನಾಡಿನ ಅನೇಕ ಕಡೆ ಸಿಡಿಯಾಡುವ ಪದ್ಧತಿ ಸಾಮಾನ್ಯವಾಗಿದೆ. ಹೆಂಗಸರು, ಗಂಡಸರು ಇಬ್ಬರೂ ಆಡುತ್ತಾರೆ. ಹೀಗೆ ಮೂಲದ ನರಬಲಿ ಕ್ರಮೇಣ ಸಿಡಿಯ ಸಾಂಕೇತಿಕ ರೂಪ ತಾಳಿತು ಸಿಡಿಯಾಡುವವರನ್ನು ಪ್ರಜ್ಞೆ ತಪ್ಪಿಸುವುದು ಅವರು ದೇವರಿಗೆ ಬಲಿಯಾದುದನ್ನು ಸೂಚಿಸುವುದು.

ಸಿಡಿಯ ಆಚರಣೆಯಲ್ಲಿ ಹಲವಾರು ಬಗೆಗಳಿವೆ. ತೊಟ್ಟಿಲು ಸಿಡಿ, ಬೆನ್ನುಸಿಡಿ, ಗೊಂಬೆಸಿಡಿ, ಹೀಗೆ ವೈವಿಧ್ಯತೆಯನ್ನು ಕಾಣಬಹುದು. ಒಂದು ಉದ್ದವಾದ ಕಂಬಕ್ಕೆ ಒಂದು ಅಡ್ಡಗಂಬವನ್ನು ಹಾಕಿ ಸಿಡಿಯಾಡುವ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಸಿಡಿಯಾಡುವವನ ಬೆನ್ನಿನ ಮೇಲೆ ಬಾಳೇ ಹಣ್ಣು ಉಜ್ಜುವುದರಿಂದ ಚರ್ಮ ಹದವಾಗುತ್ತದೆ. ಹೀಗೆ ಹದವಾದ ಚರ್ಮಕ್ಕೆ ಉಕ್ಕಿನ ಕೊಂಡಿಗಳನ್ನು ಚುಚ್ಚಿ ಸಿಡಿಯಾಡಿಸುತ್ತಾರೆ. ಇದನ್ನೇ ನುಂಕೇ ಮಲೆ ಭೈರವನ ಕ್ಷೇತ್ರದಲ್ಲಿ ಆಡುವುದುಂಟು.

ತೇರು ಹರಿದ ನಂತರ ಮರುದಿನವೇ 'ಸಿಡಿ' ಆಡುವರು. ಈ ಸಿಡಿಯನ್ನು ತುಪ್ಪದಮ್ಮನಿಗೆ ಸಲ್ಲುತ್ತದೆ ಎಂದು ಹೇಳುವರು. ಸಿಡಿವಾಡುವಾತನನ್ನು ಮದಲಿಂಗನೆಂದು ಕರೆಯುತ್ತಾರೆ. ಈ ಮನುಷ್ಯನು ಕಂಕಣವನ್ನು ಕಟ್ಟಿದಂದಿನಿಂದ ಐದು ದಿನಗಳವರೆಗೂ ಹಾಲು - ಹಣ್ಣನ್ನು ಮಾತ್ರ ಸೇವಿಸುತ್ತಿದ್ದು ಆರನೆಯದಿನದಂದು ಸಿಡಿಯನ್ನಾಡಿ ಉಪವಾಸ ವ್ರತವನ್ನು ಮುಗಿಸುವನು ಈ ದಿನ ತುಪ್ಪದಮ್ಮನ ದೇವಸ್ಥಾನದಲ್ಲಿ ವಿಶೇಷವಾದ ಪೂಜೆಯು ನಡೆಯುತ್ತದೆ. ತುಪ್ಪದಮ್ಮನಿಗೆ ಬಾಯಿ ಬೀಗವನ್ನು ಬೇವಿನ ಸೀರೆಯನ್ನು ಹರಕೆಗಳನ್ನು ತೀರಿಸುತ್ತಾರೆ.

ಈ ಮುಂಚೆ ನಾಗಸಮುದ್ರದ ನಾಯಕ ಜನಾಂಗದವರು ಸಿಡಿ ಆಡುತ್ತಿದ್ದರು. ಈಗ ಕೊಮ್ಮೆನ ಪಟ್ಟಿಯ ತಳವಾರ (ವಾಲ್ಮೀಕಿ) ಮನೆತನದವರು 'ಸಿಡಿ' ಮರವನ್ನು ತಂದು ಆಡುತ್ತಾರೆ. ಸಿಡಿ ಆಡುವವನು ಮೊದಲನೆಯ ಕಂಕಣ ಕಟ್ಟುವದಿನ ಬರುತ್ತಾನೆ. ಆಗ ಸಿಡಿವಾಡುವಾತನನ್ನು ಮದುವೆ ಮದಲಿಂಗನನ್ನ ಮಾಡಿದ ರೀತಿ ಕಂಕಣ ಕಟ್ಟಿ ಅರಿಶಿಣ ಹಚ್ಚಿ ಪೂಜೆ ಮಾಡಿ ಶಾಸ್ತ್ರೋಕ್ತವಾಗಿ ಮದುಮಗನಂತೆ ಆಚರಣೆ ಮಾಡುತ್ತಾರೆ. ವಿಧಿವತ್ತಾಗಿ ಹೆಂಡತಿ ಸತ್ತವರು 'ಸಿಡಿ' ಆಡುವಂತಿಲ್ಲ. ಸಿಡಿ ದಿನ ಮದುಮಗನಂತೆ ಮಾಡಿಕೊಂಡು ಸಿಡಿಮರದ ಬಳಿ ತರುತ್ತಾರೆ. ತಲೆಗೆ ಪಂಚೆಯನ್ನು ಕಟ್ಟಿ ಹೊಂಬಾಳೆಯನ್ನು ಸಿಗಿಸಿ ಹೂವನ್ನು ಹಾಕುತ್ತಾರೆ. ಬೆಳ್ಳಿಯ ಪದಕವನ್ನು ಧರಿಸಿ ಕರೆದುಕೊಂಡು ಬಂದು ಕಟ್ಟೆಯ ಮೇಲೆ ಕೂರಿಸುತ್ತಾರೆ.

ನಂತರ ಮದ್ಲಿಂಗನನ್ನು ಕರೆದುಕೊಂಡು ಬಂದು ಮೊದಲು ಹರಳಯ್ಯನನ್ನು ಪೂಜೆಮಾಡಿಸಿಕೊಂಡು ಬಂದ ನಂತರ ತುಪ್ಪದಮ್ಮನ ಮತ್ತು ಸಿದ್ದೇಶ್ವರನ ಮಠಕ್ಕೆ ಕರೆದುಕೊಂಡು ಹೋಗಿ ಪೂಜೆ ಮಾಡಿಸಿಕೊಂಡು ಬರುತ್ತಾರೆ. ಸಿದ್ದೇಶ್ವರನ ದೇವಸ್ಥಾನದಲ್ಲಿ ಸಿಡಿಯಾಡುವವನ್ನು ಮಲಗಿಸಿ ಬಾಳೇಹಣ್ಣು ತಿಕ್ಕಿ, ತೀರ್ಥ ಕುಡಿಸಿ, ಗಂಧವನ್ನು ಬೆನ್ನಿಗೆ ತಿಕ್ಕಿ ನಂತರ ದೇವರಿಗೆ ಹಾಕಿದ ಹಾರವನ್ನು ಮದ್ಲಿಂಗನಿಗೆ ಹಾಕಿ ಸಿಡಿಮರದ ಬಳಿ ಮೆರವಣಿಗೆಯ ಮೂಲಕ ಕರೆತರಲಾಗುತ್ತದೆ. ನಂತರ ಕೊಂಡಿ ಕಟ್ಟೆಯ ಬಳಿ ಕರೆತರುತ್ತಾರೆ. ಇಲ್ಲಿ ತುಪ್ಪದಮ್ಮನ ಪಾದಗಳಿರುತ್ತವೆ. ಹರಳಯ್ಯನ ಕಡೆಯವರು ಕೊಂಡಿಗಳನ್ನು ತಯಾರಿಸಿಕೊಂಡು ತಂದಿರುತ್ತಾರೆ. ಹರಳಯ್ಯನವರ ಹತ್ತಿರ ಕೊಂಡಿಗಳು, ಪತ್ತಗಳಿರುತ್ತವೆ. ಇವರು ಮತ್ತೊಮ್ಮೆ ಸಿಡಿವಾಡುವಾತನನ್ನು ಕರ್ಪೂರದಮ್ಮನ ದೇವಸ್ಥಾನದ ಕಡೆಗೆ ಕರೆದುಕೊಂಡು ಹೋಗಿ ಪೂಜೆ ಮಾಡಿಸಿಕೊಂಡು ಮತ್ತೆ ಆಲದ ಮರದ ಕಟ್ಟೆಗೆ ತಂದು ಮಲಗಿಸುತ್ತಾರೆ. ಗುರಿಕಾರರಾದ ವಾಲ್ಮೀಕಿ ಜನಗಳು ಉರಿಮೆಯನ್ನು ಕರೆದುಕೊಂಡು ಬಂದು ಮದ್ಲಿಂಗನನ್ನು ಎಚ್ಚರ ತಪ್ಪುವ ಹಾಗೆ ಅವನ ಕಿವಿಯಲ್ಲಿ ಜೋರಾಗಿ ಬಡಿಸುತ್ತಾರೆ. ಅದೇ ಸಮಯಕ್ಕೆ ಹರಳಯ್ಯನವರು ಉಕ್ಕಿನ ಕೊಂಡಿಗಳನ್ನು ತಂದು ಬೆನ್ನಿಗೆ ಹಾಕಿ ಕರೆದುಕೊಂಡು ಹೋಗಿ ಸಿಡಿಮರಕ್ಕೆ ಬಿಗಿಯುತ್ತಾರೆ. ಅನಂತರ ಮದ್ಲಿಂಗನ ಕೈಯಲ್ಲಿ ಕತ್ತಿಯನ್ನು ಕೊಡುತ್ತಾರೆ. ಆಗ ಮತ್ತೊಮ್ಮೆ ಸಿಡಿಮರಕ್ಕೆ ಕಟ್ಟಿ ಮೇಲಕ್ಕೆತ್ತುತ್ತಾರೆ. ಮೂರು ಬಾರಿ ಸುತ್ತು ಹೊಡೆದು ಕೆಳಗಿಳಿಸಿ ಪೂಜೆ ಮಾಡುತ್ತಾರೆ. ಅನಂತರ ಬರಿಸಿಡಿಮರವನ್ನು ಮೂರು ಬಾರಿ ಸುತ್ತಿಸುತ್ತಾರೆ ಆಗ ಮದ್ಲಿಂಗನು ಒಂದೊತ್ತನ್ನು ಬಿಡುತ್ತಾನೆ.

ಸಿಡಿಯಾಡಿದ ತಕ್ಷಣ ಗುರಿಕಾರರು (ವಾಲ್ಮೀಕಿ) ಬೆಟ್ಟದ ಮೇಲಿರುವ ದೀಪವನ್ನು ಹಚ್ಚುತ್ತಾರೆ. ಇದರಿಂದ ಸುತ್ತ ಮುತ್ತಲ ಹಳ್ಳಿಯವರಿಗೆ ಈ ದೀಪವನ್ನು ನೋಡಿ ಸಿಡಿ ಮುಗಿಯಿತೆಂದು ತಮ್ಮ ಉಪವಾಸ ವ್ರತವನ್ನು ಬಿಡುತ್ತಿದ್ದರು. ಇದರಿಂದ ಒಂದೊತ್ತು ಇರುವವರೆಲ್ಲಾ ದೂರದಿಂದಲೇ ದೇವರಿಗೆ ನಮಿಸಿ ತಮ್ಮ ಉಪವಾಸವನ್ನು ಬಿಟ್ಟು ಊಟಮಾಡುವ ಪದ್ಧತಿಯಿದೆ. ಐತಿಹ್ಯದ ಪ್ರಕಾರ ಚಿತ್ರದುರ್ಗದ ಪಾಳೆಯಗಾರರು (ಕೋಟೆಯೊಳಗೆ ಮದಕರಿನಾಯಕರು) ನುಂಕೇಮಲೆಯ ಸಿದ್ದೇಶ್ವರನ ಭಕ್ತರಾಗಿದ್ದು ಉಪವಾಸವಿದ್ದ ಪಾಳೆಯಗಾರರೆಲ್ಲಾ ಈ ದೀಪವನ್ನು ನೋಡಿ ಉಪವಾಸವನ್ನು ಬಿಡುತ್ತಿದ್ದರು ಎನ್ನುವ ಪ್ರತೀತಿ ಇದೆ.

ಗ್ರಾಮಸ್ಥರು ಸಿಡಿಯಾಡಿದಾತನಿಗೆ ಹೊಸಬಟ್ಟೆಯನ್ನು ಕೊಡುತ್ತಾರೆ. ಇಲ್ಲಿಗೆ ಸಿಡಿ ಆಚರಣೆ ಮುಕ್ತಾಯವಾಗುತ್ತದೆ. ರಾತ್ರಿಯಲ್ಲಾ ಭಕ್ತಾದಿಗಳಿಂದ ಮೊದಲು ಮೆರವಣಿಗೆ ನಡೆಯುತ್ತಿತ್ತು. ಈಗೀಗ ಕೇವಲ ಭಜನೆ ಮಾತ್ರ ನಡೆಯುತ್ತದೆ. ರಾತ್ರಿ ಕೊಬ್ಬರಿ ಸುಡುವ ಆಚರಣೆಯಿದೆ. ಬೆಳಗಿನ ಜಾವ ನಾಲ್ಕು ಗಂಟೆಗೆ ದೇವರನ್ನು ಎಬ್ಬಿಸಿ ಮಲ್ಲಿಕಾರ್ಜುನನ ಗುಡಿಗೆ ತಂದು ಅನಂತರ ಹೊಂಡಕ್ಕೆ ಕರೆತರಲಾಗುತ್ತದೆ. ಗಂಗೆ ಪೂಜೆ ಮಾಡಿಕೊಂಡು ಮಠದ ಮುಂದೆ ಬಂದಾಗ ಭೈರವನಿಗೆ ತೆರೆ ಅಡ್ಡಹಿಡಿದು ವಾಲ್ಮೀಕಿ ಜನರು ಬೇಟೆಯನ್ನು ಕಡಿಯುತ್ತಾರೆ. ಇದನ್ನೇ 'ಪಿಟ್ಟು ಬುಕ್ತಿ' ಎಂದು ಕರೆಯುತ್ತಾರೆ. ಅಲ್ಲಿಂದ ನೀರು ಹಾಕಿ ದೇವರನ್ನು ನಡೆ ಮುಡಿಯ ಮೇಲೆ ಮಡಿವಾಳರು ಮಡಿಸೀರೆಯನ್ನು ಹಾಸುವ ಮೂಲಕ ದೇವರನ್ನು ಕಂಬದ ಹತ್ತಿರ ತರುತ್ತಾರೆ. ಇಲ್ಲಿ ಎರಡು ಕಂಬಗಳಿವೆ ಹೆಣ್ಣಿನ ಕಡೆಯವರೆಂದು ಹೇಳುವ ಪೂಜಾರಿಗಳೂ ಗಂಡಿನ ಕಡೆಯವರೆಂದು ಹೇಳುವ ಪೂಜಾರಿಗಳೂ ಈ ಎರಡು ಕಂಬಗಳಿಗೆ ಎರಡು ಕಡೆಯವರು ದೀಪಧಾರಣೆ ಮಾಡುತ್ತಾರೆ. ನಂತರ ದೇವರನ್ನು ಗುಡಿತುಂಬಿಸುತ್ತಾರೆ.

ಇದನ್ನು ಸುಂಕೇಮಲೆಯಲ್ಲಿಯೂ ಸಹ ವಿಶೇಷವಾಗಿ ಆಚರಿಸಲಾಗುವುದು. ಈ ಹಬ್ಬದಲ್ಲಿ ಗೋರಕ್ಷನಾಥ ಮಠದಲ್ಲಿ ಗದ್ದುಗೆಯ ಮೇಲೆ 'ಪರದೇಶಿ' ಯು ಪಟ್ಟಕ್ಕೆ ಕೂರುತ್ತಾನೆ. ಆಚಾರಿಯು ಈತನನ್ನು ಕರೆದುಕೊಂಡು ಹೋಗಿ ಬಿಡುವ ಸಂಪ್ರದಾಯವಿದೆ. ಈತ ಒಂಭತ್ತು ದಿನಗಳವರೆಗೂ ಹಾಲು ಹಣ್ಣು ಸೇವಿಸುತ್ತಾ ಇರಬೇಕಾಗುತ್ತದೆ. ಪಕ್ಕದಲ್ಲಿ ನವಧಾನ್ಯಗಳನ್ನು ಉಸುಕಿ (ಮರಳು)ನೊಂದಿಗೆ ಹಾಕಿದಾಗ ಅವು ಮೊಳಕೆಯೊಡೆಯುತ್ತದೆ. ಇವು ಸರಿಯಾಗಿ ಮೊಳಕೆಯೊಡೆದಾಗ ಸ್ವಾಮಿಯು ಪರಿಶುದ್ಧ ಎನ್ನುವ ಪ್ರತೀತಿಯಿದೆ. ಒಂಭತ್ತು ದಿನಗಳ ನಂತರ ಸ್ವಾಮಿಯು ಎದ್ದಾಗ 'ರೋಟ್' ಎಂಬುದಾಗಿ ಮಾಡುವ ಸಂಪ್ರದಾಯವಿದೆ. ಗೋದಿ, ಸಕ್ಕರೆ, ಜೀರಿಗೆ, ಮೆಣಸು ಇದನ್ನೆಲ್ಲಾ ಹಾಕಿ ಸಹಿ ತಿಂಡಿಮಾಡುವರು. ಇದನ್ನು ಸ್ವಾಮಿಯು ಸೇವಿಸಿ ನಂತರ ಭಕ್ತಾದಿಗಳಿಗೆ ಹಂಚುತ್ತಾರೆ.

ನಂತರ ಆಯುಧ ಪೂಜೆಯದಿನ ಪೂಜಾರಿಗಳು ಮೊಳಕಾಲ್ಮುರಿಗೆ ಹೋಗಿ ನಾಯಕ ಜನಾಂಗದವರ ಮನೆಯಿಂದ ದೇವರ ಬೆಳ್ಳಿ ಸಾಮಾನುಗಳನ್ನು ತಂದು ದೇವರಿಗೆ ಏರಿಸುತ್ತಾರೆ. ನಂತರ ಕುದುರೆಯನ್ನು ಹೊಂಡಕ್ಕೆ ತೆಗೆದುಕೊಂಡು ಹೋಗಿ ಸ್ನಾನ ಮಾಡಿಸಿಕೊಂಡು ಬಂದು ಗುಡಿಯಲ್ಲಿಡುವರು. ನಂತರ ಮರುದಿನ ಬೆಳಿಗ್ಗೆ ಉತ್ಸವ ಮೂರ್ತಿಯನ್ನು ತಯಾರಿಸುತ್ತಾರೆ. ಆ ಕುದುರೆಯ ಮೇಲೆ ಉತ್ಸವ ಮೂರ್ತಿಯನ್ನು ಇಟ್ಟು ರೇಷ್ಮೆ ವಸ್ತ್ರ, ಬೆಳ್ಳಿಯ ಆಭರಣಗಳನ್ನು ಹಾಕಿ ಅಲಂಕರಿಸುವರು. ನಂತರ ಭಕ್ತಾಧಿಗಳೆಲ್ಲರೂ ಸೇರಿ ಸ್ವಾಮಿಯನ್ನೊಡಗೂಡಿ ದೇವರನ್ನು ಈ ಕಡೆಗೆ ತೆಗೆದುಕೊಂಡು ಬರುವಾಗ ಹಿಂದಕ್ಕೂ ಮುಂದಕ್ಕೂ ವಕ್ರವಾಗಿ ತಿರುಗುತ್ತಾ ಬರುತ್ತಾರೆ. ಇದನ್ನು ವೈಯ್ಯಾಳಿ ಎಂದು ಕರೆಯುತ್ತಾರೆ. ವಿಶೇಷವಾಗಿ ಕಾವಲುಗಾರರು (ವಾಲ್ಮೀಕಿ) ಉತ್ಸವ ಮೂರ್ತಿಯನ್ನು ಹೊರುತ್ತಾ ಅವರ ಶಕ್ತಿಗನುಗುಣವಾಗಿ ೧೦ - ೧೫ - ೨೦ ಸುತ್ತುಗಳನ್ನು ಸುತ್ತುತ್ತಾ ಬನ್ನಿಮರದ ಕಡೆಗೆ ಬರುತ್ತಾರೆ. ಇದರಲ್ಲಿ ಅಗಸರು ಗೊರವರು, ಬಾಗವಹಿಸುತ್ತಾ ಹಿಂದಿನಿಂದಲೂ ಆಚರಿಸಿಕೊಂಡು ಬರುತ್ತಾರೆ.

ನಂತರ ಬನ್ನಿಮರದ ಕಡೆಗೆ ಬಂದು ಪತ್ರೆಯನ್ನು ಹರಿದು ಕೊಂಡು ಹೋಗಿ ಎಲ್ಲಾ ದೇವರಿಗೂ ಪೂಜೆಮಾಡಿಕೊಂಡು ಬಂದು ಹಮ್ಮು ಎಂದು ಮೂರು ಬಾರಿ ಹೊಡೆಯುತ್ತಾರೆ. ಬನ್ನಿ ಮರದಡಿಯಲ್ಲಿ ಉತ್ಸವ ಮೂರ್ತಿಯನ್ನು ಇಟ್ಟು ವಾಲ್ಮೀಕಿ ಜನಾಂಗದವರು ಪ್ರತಿ ವರ್ಷದಂತೆ ಮೂರು ಬಿಲ್ಲು ಬಾಣಗಳನ್ನು ತಂದು ಪೂಜಾರಿಗಳ ಕೈಗೆ ಕೊಡುತ್ತಾರೆ. ಬನ್ನಿ ಮರದಡಿಯಲ್ಲಿ ಉತ್ಸವ ಮೂರ್ತಿಯನ್ನು ಇಟ್ಟು ವಾಲ್ಮೀಕಿ ಜನಾಂಗದವರು ಪ್ರತೀವರ್ಷದಂತೆ ಮೂರು ಬಿಲ್ಲು ಬಾಣಗಳನ್ನು ತಂದು ಪೂಜಾರಿಗಳ ಕೈಗೆ ಕೊಡುತ್ತಾರೆ. ಬನ್ನಿಮರದ ಪೂರ್ವದ ಕಡೆಗೆ 'ಬಾಣ'ವನ್ನು ಮೂರುಬಾರಿ ಬಿಡುತ್ತಾರೆ. ಮೊದಲಲ್ಲಿ ಬಿಟ್ಟ ಬಾಣ ರಭಸದಿಂದ ಹೋದರೆ ಮುಂಗಾರಿ ಮಳೆಯು ಭರ್ಜರಿಯಾಗಿ ಬರುತ್ತದೆಯೆಂದೂ, ಮಧ್ಯದಲ್ಲಿ ಬಿಟ್ಟ ಬಾಣ ಮಧ್ಯದಲ್ಲಿ ಬರುವ ಮಳೆಯೆಂತಲೂ ಕೊನೆಯಲ್ಲಿ ಬಿಟ್ಟ ಬಾಣ - ಹಿಂಗಾರಿ ಮಳೆಯಂತಲೂ ನಂಬಿ ಕೊಂಡು ಬಂದಿರುವ ಸಂಪ್ರದಾಯವಿದೆ.

ಒಂದು ಬಾರಿ ಬಿಟ್ಟ ಬಾಣವು ಮರಗಳಿಗೆ ತಗುಲಿದ್ದರಿಂದ ಮರಗಳೆಲ್ಲಾ ಒಣಗಿ ಹೋದವೆಂದೂ. ಹಾಗೂ ೧೫ ವರ್ಷಗಳ ಹಿಂದೆ ಬಿಟ್ಟ ಬಾಣ ವಿರುದ್ಧವಾಗಿ ಬಂದದ್ದರಿಂದ ಆ ವರ್ಷ ಬರಗಾಲ ಬಂದಿತ್ತು ಎಂದು ಹೇಳುವ ಪ್ರತೀತಿಯಿದೆ. ಪೂಜಾರಹಟ್ಟಿಯಲ್ಲಿ ಪೂಜಾರಿಗಳು ಎರಡು ಭಾಗದವರಿದ್ದು ವರ್ಷಕೊಬ್ಬರಂತೆ ಪೂಜೆ ಮಾಡುವ ಸಂಪ್ರದಾಯವಿದೆ. ಬನ್ನಿ ಮುಗಿದ ಮೇಲೆ ಭಕ್ತಾದಿಗಳೆಲ್ಲರೂ ಬನ್ನಿಯನ್ನು ಒಬ್ಬರಿಗೊಬ್ಬರು ವಿನಿಮಯ ಮಾಡಿಕೊಳ್ಳುತ್ತಾ 'ಬಂಗಾರ' ವಾಗಲೆಂದು ಹಾರೈಸುತ್ತಾರೆ. ವಾಲ್ಮೀಕಿ ಜನಾಂಗದವರು ಜಾತ್ರೆಯಲ್ಲಿ ಮಾಡುವ ಸಂಪ್ರದಾಯದಂತೆ 'ದಸರಾ' ಹಬ್ಬದಲ್ಲಿಯೂ ಸಹ ಬೇಟೆಯನ್ನು ಕಡಿದು 'ಹಿದ್ದು ಬುಕ್ಕಿ' ಎಂದು ಮಾಡುವ ಸಂಪ್ರದಾಯವಿದೆ.

**ಕಾರ್ತಿಕ ಮಾಸದಲ್ಲಿ :**

ಕಾರ್ತಿಕ ಮಾಸದ ಮೊದಲ ದಿನವೇ ಬಲಿ ಪಾಡ್ಯ. ದಾನ ಶೂರ ಬಲಿಚಕ್ರವರ್ತಿ ವಾಮನನಿಂದ ಪಡೆದ ವರದಂತೆ ಇಡೀ ವರ್ಷದಲ್ಲಿ ಅಂದು ಮಾತ್ರ ಆತ ಭೂಲೋಕವನ್ನು ಕಾಣಲು ಬರುತ್ತಾನೆ. ಮಹಾಮಹಿಮನಾದ ಅವನ ಸ್ವಾಗತಾರ್ಹ ಅಂದು ಸಂಜೆ ಎಲ್ಲೆಲ್ಲೋ ದೀಪಗಳ ಸಾಲು ಅವನದೇ ಸ್ಮರಣೆ ಸ್ತುತಿ ಪೂಜೆ. ಈ ಕಾರ್ತಿಕ ದೀಪಗಳಿಂದ ದೇವತೆಗಳೂ ಪಿತೃಗಳೂ ಸುಪ್ರೀತರಾಗಿ ಅನುಗ್ರಹಿಸುತ್ತಾರೆ - ಎಂಬುದು ಶಾಸ್ತ್ರಗಳ ಆದೇಶ . ಕತ್ತಲೆಯಿಂದ ಬೆಳಕಿನೆಡೆಗಿನ ಪಯಣವೇ ಈ ದೀಪೋತ್ಸವದ ಸಂದೇಶ. ಈ ಹಬ್ಬದಲ್ಲಿ ಜೂಜಾಟ ಒಂದು ಮನೋ ವಿನೋದ. ಶಿವ ಪಾರ್ವತಿಯರೂ ಸಹ ಈ ರಾತ್ರಿ ಜೂಜಾಡಿದರಂತೆ.

ಕಾರ್ತಿಕ ಮಾಸದಲ್ಲಿ ಭಕ್ತಾದಿಗಳೆಲ್ಲರೂ ಸೇರಿ ಔಡಲ ಎಣ್ಣೆಯನ್ನು ಹಾಕಿ ದೀಪಗಳನ್ನು ಹಚ್ಚುತ್ತಾರೆ. ಹಿಂದೆ ತಾವೇ ಬೆಳೆದ ಔಡಲದಿಂದ ಎಣ್ಣೆಯನ್ನು ಮಾಡಿಕೊಂಡು ಬಂದು ದೀಪ ಹಚ್ಚುವ ಸಂಪ್ರದಾಯವಿತ್ತು ಹಾಗೂ ಕುಂಬಾರನಾದವನು ಮಣ್ಣಿನಿಂದ ತಯಾರಿಸಿದ ಹಣತೆಗಳನ್ನು ಮಾಡಿಕೊಂಡು ಬಂದು ಕೊಡುವ ಸಂಪ್ರದಾಯವಿತ್ತು. ಆದರೆ ಆಧುನಿಕತೆಯ ಪ್ರಭಾವದಿಂದ ಇವು ಉಳಿದಿಲ್ಲ. ಭಕ್ತಾದಿಗಳು ಹಗಲು, ಅಥವಾ ರಾತ್ರಿಯ ಸಮಯದಲ್ಲಿ ದೀಪಗಳನ್ನು ಹಚ್ಚುವುದರ ಮೂಲಕ ತಮ್ಮ ಹರಕೆಯನ್ನು ತೀರಿಸುತ್ತಾರೆ. ಬಂದ ಭಕ್ತಾದಿಗಳಿಗೆ ಮಂಡಕ್ಕಿ, ಬೆಲ್ಲ, ಕೊಬ್ಬರಿ ಇವುಗಳನ್ನು ಬೆರಿಸಿ ಹಂಚಲಾಗುವುದು. ಈ ಕಾರ್ಯಕ್ರಮಕ್ಕೆ ಎಲ್ಲಾ ಜನಾಂಗದವರು ಭಾಗವಹಿಸುತ್ತಿದ್ದು ಕೊನೆಯವಾರ ಸುತ್ತ - ಮುತ್ತಲ ಮೂವತ್ಮೂರು ಹಳ್ಳಿಗರು ಸೇರುತ್ತಾರೆ.

**ಶಿವರಾತ್ರಿ :**

ಶಿವರಾತ್ರಿ ಪ್ರಾಂತ್ಯಭೇದವಿಲ್ಲದೆ ದೇಶಾದ್ಯಂತ ಆಚರಿಸುವ ಉಪವಾಸ, ಜಾಗರಣೆ ಪ್ರಧಾನವಾದ ಹಬ್ಬ. ಇಂದ್ರಿಯ ಖಂಡನೆ ದೇಹದಂಡನೆಗೆ ಇಲ್ಲಿ ಪ್ರಾಶಸ್ತ್ಯ. ಮಹಾಶಿವರಾತ್ರಿ ನಡುರಾತ್ರಿಯಂದು ಶಿವನು ಸ್ವಯಂಭುವಾಗಿ ಲಿಂಗರೂಪದಿಂದ ಉದ್ಭವಿಸಿದನೆಂದು ಹೇಳುತ್ತಾರೆ. ಶಿವನು ನೃತ್ಯಮಾಡಿದ ದಿನವೆಂತಲೂ, ಬೇಟೆಗೆ ಹೋಗುವ ದಿನವೆಂತಲೂ ಹಾಲಾಹಲ ವಿಷ ಕುಡಿದ ದಿನವೆಂತಲೂ ಕರೆಯುವ ಪ್ರತೀತಿ. ಅಂತೂ ಶಿವನಿಗೆ ಅತ್ಯಂತ ಪ್ರಿಯವಾದ ದಿನ ಈ ಶಿವರಾತ್ರಿ. ಅಂದು ಶಿವಾಲಯಗಳಲ್ಲಿ ದ್ವಾರಕ, ಜ್ಯೋತಿರ್ಲಿಂಗ, ಕ್ಷೇತ್ರಗಳಲ್ಲಿ ಗೋಕರ್ಣ, ಯಾಣ, ಕಾಶೀ, ರಾಮೇಶ್ವರ ಮುಂತಾದ ತೀರ್ಥ ಕ್ಷೇತ್ರಗಳಲ್ಲಿ ಲಕ್ಷ ಲಕ್ಷ ಜನರು ಪೂಜೆ ಪುನಸ್ಕಾರಗಳಲ್ಲಿ ಮಗ್ನರಾಗಿರುತ್ತಾರೆ. ಈ ದಿನವಿಡೀ ರುದ್ರಾಭಿಷೇಕ, ಹರಿಕಥೆ, ಭಜನೆ ಸತ್ಸಂಗಾದಿಗಳಲ್ಲಿ ಮಗ್ನರಾಗಿರುತ್ತಾರೆ. ಈ ವ್ರತವನ್ನು ಮಾಡುವುದರಿಂದ ಸರ್ವ ಪಾಪಗಳು ದೂರವಾಗುವವಂತೆ. ನುಂಕೇಮಲೆಯಲ್ಲಿಯೂ ಸಹ ಶಿವಾಲಯವಿದ್ದು ಮಹಾಶಿವರಾತ್ರಿಯನ್ನು ಆಚರಿಸಲಾಗುವುದು.

ಶಿವರಾತ್ರಿಯ ದಿನದಂದು ಮಲ್ಲಿಕಾರ್ಜುನನ (ಶಿವ) ದೇವಾಲಯದಲ್ಲಿ ಪೂಜಾರಿಗಳು ವಿಶೇಷವಾದ ಪೂಜೆ ಮಾಡುತ್ತಾರೆ. ಪೂಜಾರಹಟ್ಟಿ, ಕೊಮ್ಮನ ಹಟ್ಟಿ, ಹಳೆಕೆರೆ ಮುಂತಾದ ಸುತ್ತಮುತ್ತಲ ಹಳ್ಳಿಯವರು ಸೇರಿ ತಮ್ಮ ಕೈಲಾದಷ್ಟು ರಾತ್ರಿಯೆಲ್ಲಾ ಅಡಿಗೆ ಮಾಡುತ್ತಾರೆ. ಪೂಜಾರಿಗಳು ಬಿಲ್ವಪತ್ರಿಯನ್ನು ಸೂರಾ ಒಂದು ಉತ್ತಾಣಿಕಡ್ಡಿಯನ್ನು ತರುತ್ತಾರೆ. ಉತ್ತಾಣಿ ಕಡ್ಡಿಯನ್ನು ಎಣ್ಣೆಯಲ್ಲಿ ಅದ್ದಿ ದೇವರಿಗೆ ಇಡುತ್ತಾರೆ. ನಂತರ ಪೈರಾಪುರದ ಬಸವರಾಜ ಸ್ವಾಮಿಗಳು ಬಂದು ೧೦೧ ಮಂತ್ರಗಳನ್ನು ಪಠಿಸಿ ಐದು ಪೂಜೆಗಳನ್ನು ಮಾಡುತ್ತಾರೆ.

ನಂತರ ದೇವರ ಮೇಲಿನ ಅಲಂಕಾರವನ್ನು ತೆಗೆದು ಎಣ್ಣೆಯಿಂದ ದೇವರ ಮೂರ್ತಿಯನ್ನು ತಿಕ್ಕಿ ಬಿಸಿನೀರಿನಿಂದ ಸ್ನಾನ ಮಾಡಿಸಿ ಬಾಳೆಹಣ್ಣು, ಮತ್ತು ಪಂಚಾಮೃತದಿಂದ ತೊಳೆದು ಐದು ಪೂಜೆಗಳನ್ನು ಮಾಡಲಾಗುತ್ತದೆ. ನಂತರ ಆರನೆಯ ಪೂಜೆ ಮಾಡುವಾಗ ಮೊದಲಿನಂತೆಯೇ ಮತ್ತೆ ಎಣ್ಣೆ ಹಚ್ಚಿ ಸ್ನಾನ ಮಾಡಿಸಿ ಗಂಧಹಚ್ಚಿ ಬಿಲ್ವಪತ್ರಿಯ ಹಾರ ಹಾಕಿ ನಂತರ ಪತ್ರೆಯನ್ನು ಅಂಟಿಸುತ್ತಾರೆ. ಆಗ ಶಿವನು ಕಾಸಿಯಲ್ಲಿರುತ್ತಾನೆಂದು ಹೇಳುತ್ತಾರೆ. ಕಾರಣ ಬೇಟೆ ಮಾರ್ಗವಾಗಿ ಕಾಸಿಗೆ ಹೋಗುತ್ತಾನೆ ಎನ್ನುವ ನಂಬಿಕೆಯಿದೆ. ಹಾಗೆಯೇ ಭೈರವನಾಥನಿಗೂ, ಕರ್ಪೂರದಮ್ಮನಿಗೂ ವಿಶೇಷವಾದ ಪೂಜೆ ಸಲ್ಲಿಸುತ್ತಾರೆ. ಮಲ್ಲಿಕಾರ್ಜುನ ದೇವರಿಗೆ ಮಾತ್ರ ೧೦೧ ಪೂಜೆಗಳನ್ನು ಮಾಡುತ್ತಾರೆ. ರಾತ್ರಿಯೆಲ್ಲಾ ಪುರಾಣ ಮಾಡಿ ಭಕ್ತಾದಿಗಳು ರಾತ್ರಿಯೆಲ್ಲಾ ಮಾಡಿದ ಅಡಿಗೆಯನ್ನು ದೇವರ ಪ್ರಸಾದವೆಂದು ಎಲ್ಲರೂ ಊಟ ಮಾಡುವರು.

**ಸಣ್ಣ ಜಾತ್ರೆ :**

ಸುತ್ತ ಮುತ್ತಲ ಹಳ್ಳಿಗಳಿಗೆ ಮಳೆ - ಬೆಳೆಗಳು ಸಮೃದ್ಧವಾದಲ್ಲಿ ಆ ವರ್ಷ ಗುಡ್ಡದಿಂದ ಸುಂಕಪ್ಪನನ್ನು ಮೊಳಕಾಲ್ಮುರಿಗೆ ಕರೆದುಕೊಂಡು ಹೋಗುವ ಸಂಪ್ರದಾಯವಿದೆ. ಇದನ್ನು ಸಣ್ಣಜಾತ್ರೆಯೆಂದು ಕರೆಯುವರು. ಮೊಳಕಾಲ್ಮುರು ನವರು ಮಾತ್ರ ಪ್ರತಿ ಮೂರುವರ್ಷಕ್ಕೊಮ್ಮೆಯಾದರೂ ಸಣ್ಣ ಜಾತ್ರೆಯನ್ನು ಮಾಡುವ ಪರಿಪಾಠವಿದೆ ಇದರಲ್ಲಿ ಕೊಮ್ಮನಪಟ್ಟಿ, ಹಾನ್‌ಗಲ್, ಪೂಜಾರಪಟ್ಟಿ ಹೀಗೆ ಸುತ್ತ ಮೂವತ್ಮೂರು ಹಳ್ಳಿಯ ಭಕ್ತರೆಲ್ಲರೂ ಸೇರುತ್ತಾರೆ. ಈ ಸಣ್ಣ ಜಾತ್ರೆಯನ್ನು ಮಾಡಲು ಗೌಡರು, ನಾಯಕರು, ಹರಳಯ್ಯನವರು, ಬಣಕಾರರು ಹಾಗೂ ಊರಿನ ಹಿರಿಯ ಪ್ರಮುಖರು ಒಂದೆಡೆ ಸೇರಿ ದೇವರನ್ನು ಕರೆತರುವುದಾಗಿ ಗ್ರಾಮಸ್ಥರ ಸಮ್ಮುಖದಲ್ಲಿ ತೀರ್ಮಾನಿಸಲಾಗುತ್ತದೆ.

ಎಲ್ಲಾ ಗ್ರಾಮಸ್ಥರು ನಿರ್ಧರಿಸಿದ ಮೇಲೆ ಕರ್ಪೂರದಮ್ಮನ ಹತ್ತಿರ ನಾಳೆ ಬೆಳಿಗ್ಗೆ ಹೂ ಕೇಳಲಿಕ್ಕೆ ಹೋಗುವುದಾಗಿ ಡಂಗೂರ ಸಾರುತ್ತಾರೆ. ಮರುದಿನ ಊರುಗಳ ಹಿರಿಯರೆಲ್ಲರೂ ಸೇರಿ ಸುಂಕೆ ಮಲೆಯ ಬೆಟ್ಟಕ್ಕೆ ಹಲಗೆ ಬಡಿಯುತ್ತಾ ಎಲ್ಲಾ ಜನಾಂಗದವರು ಬರುತ್ತಾರೆ. ಆ ದಿನ ಗುಡಿಯಲ್ಲಿ ವಿಶೇಷಪೂಜೆ ಮಾಡಿ ದೇವರ ಮೈಗೆಲ್ಲಾ ಪತ್ರಿ ಹೂಗಳನ್ನು ಅಂಟಿಸುತ್ತಾರೆ. ನಂತರ ಎಲ್ಲರೂ ಮೌನವಾಗಿ ಮನಸ್ಸಿನಲ್ಲಿ ಹೂವು ಕೊಡಯ್ಯ ಎನ್ನುತ್ತಾ ಆಸೆಯಿಂದ ನೋಡುತ್ತಾರೆ. ಆಗ ದೇವರು ಬಲಗಡೆಯಿಂದ ಹೂವನ್ನು ಕೊಟ್ಟರೆ ದೇವರು ಬರಲು ಒಪ್ಪಿದೆ ಎನ್ನುವ ಸೂಚನೆ ದೊರೆತು ಎಲ್ಲರೂ ಸಂತೋಷದಿಂದ ಊರಿಗೆ ಮರಳುತ್ತಾರೆ. ಆದರೆ ಎಡಗಡೆ ಪತ್ರಿಯನ್ನು ಅಥವಾ ಹೂವನ್ನು ಕೊಟ್ಟರೆ ದೇವರು ನಮ್ಮೂರಿಗೆ ಬರಲು ನಿರಾಕರಿಸಿದ ಎನ್ನುವ ಪ್ರತೀತಿಯಿದೆ. ಆಗ ಮೂವತ್ಮೂರು ಭಕ್ತಾದಿಗಳೆಲ್ಲರೂ ಈ ವರ್ಷ ನಮ್ಮೂರಿಗೆ ದೇವರು ಬರಲು ಒಪ್ಪಿಗೆ ಕೊಡಲಿಲ್ಲವೆಂದು ದುಃಖಿತಪ್ತರಾಗಿ ತಮ್ಮ ಊರಿಗೆ ಮರಳುತ್ತಾರೆ.

ನಂತರ ಇಂತಹ ದಿನ ಹಬ್ಬ ಮಾಡುವುದಾಗಿ ದಿನಾಂಕವನ್ನು ನಿಗದಿ ಪಡಿಸಿ ಮೊಳಕಾಲ್ಮುರಿಗೆ ಸುಂಕಪ್ಪನು ಬರುತ್ತಾನೆಂದು ಎಂಟು ದಿನಗಳ ಮುಂಚಿತವಾಗಿಯೇ ಸಾರುತ್ತಾರೆ. ಸಾಮಾನ್ಯವಾಗಿ ಫೆಬ್ರವರಿ ತಿಂಗಳ ೧ ಅಥವಾ ೨ನೇ ದಿನಾಂಕದಂದು ನಡೆಯುತ್ತದೆ. ಸಾರಿದ ನಂತರ ಭಕ್ತಾದಿಗಳೆಲ್ಲರೂ ಮನೆಗಳನ್ನು ಸುಣ್ಣ ಬಣ್ಣಗಳಿಂದ ಅಲಂಕರಿಸಿ ಮಾವು - ಮೈಲಿಗೆಯಿಂದ ಶುದ್ಧಗೊಳಿಸಿ ಸ್ವಾಮಿಯನ್ನು ಆಹ್ವಾನಿಸುತ್ತಾರೆ.

ಗ್ರಾಮಸ್ಥರೆಲ್ಲರೂ ಸೇರಿ ಘಟ್ಟಿಯ ರೂಪದಲ್ಲಿ ಹಣವನ್ನು ಸಂಗ್ರಹಿಸಿ ಕೊಟ್ಟು ಹರಳಯ್ಯನವರಿಗೂ ಕಾವಲುಗಾರರಿಗೂ ಕಾಳು ಕಾಸು ಕೊಡುತ್ತಾರೆ. ನಂತರ ಸ್ವಾಮಿಯನ್ನು ಪಲ್ಲಕಿಯ ಮೇಲೆ ಕೂರಿಸಿಕೊಂಡು ಸಡಗರ ಸಂಭ್ರಮದಿಂದ ಮೆರವಣಿಗೆಯ ಮೂಲಕ ಮೊಳಕಾಲ್ಮುರಿಗೆ ತಂದು ಮಾರಮ್ಮನಿಗೆ ಪೂಜೆ ಸಲ್ಲಿಸಿ ನಾನು ನಿನ್ನ ಊರಿಗೆ ಬಂದಿದ್ದೇನೆಂದು ಹೇಳಿ ನುಂಕಪ್ಪನ ಕಟ್ಟೆ ಎಂದು ಹೇಳುವ ಸ್ಥಳದಲ್ಲಿ ಕೂರಿಸುತ್ತಾರೆ. ವಿಶೇಷವಾಗಿ ನಾಯಕರು ಗೊರವರು, ಪಲ್ಲಕ್ಕಿಯನ್ನು ಹೊರುತ್ತಾರೆ. ಊರಿನ ಗೌಡನು ಗ್ರಾಮಸ್ಥರು ಮೂರುಗಂಟೆಯ ಸುಮಾರಿಗೆ ದೇವರನ್ನು ಎಬ್ಬಿಸಲು ಬರುತ್ತಾರೆ. ಮುತ್ತೈದೆಯರು ನೂರಾರು ಕಳಸಗಳನ್ನು ಇಡುತ್ತಾ ಹಾಗೂ ನಾಯಕ ಜನಾಂಗದವರು ಸಾಕಪ್ಟು ನಂದಿಕೋಲುಗಳನ್ನು ಕಾಣಿಸುತ್ತಾ ಮೆರವಣಿಗೆಯ ಮೂಲಕ ನಡಿ ಮುಡಿಯ ಮೇಲೆ ಊರು ಬಾಗಿಲು ಕೋಟೆಯ ಹತ್ತಿರ ತರುತ್ತಾರೆ. ಹೀಗೆ ಬರುವಾಗ ಮನೆಗೊಂದು ಕಾಯಿ ಕೊಡುತ್ತಾರೆ. ಮುಸ್ಲಿಂ ಜನಾಂಗದವರೂ ಸಹ ಕಾಯಿಗಳನ್ನು ಕೊಟ್ಟು ಭಾಗವಹಿಸುತ್ತಾರೆ. ಇಲ್ಲಿ ವಾಲ್ಮೀಕಿ ಜನಾಂಗದವರು ಗೌಡರು ಕೊಟ್ಟ ಬೇಟೆಯನ್ನು ಬಲಿಕೊಡುತ್ತಾರೆ. ನಂತರ ರಾತ್ರಿ ೧೦ ಗಂಟೆಯ ಸುಮಾರಿಗೆ ಮೊಳಕಾಲ್ಮುರಿನಿಂದ ಸುಮಾರು ಮೂರು ಕಿಲೋಮೀಟರ್ (ಬೆಟ್ಟಕ್ಕೆ) ಹೋಗುತ್ತಾರೆ.

ಏಣಿ ಮಾರಮ್ಮನ ಹತ್ತಿರಕ್ಕೆ ತೆಗೆದುಕೊಂಡು ಹೋಗಿ ಕಾವಲುಗಾರರು ಗೊರವರು ಬೇಟೆಗಳನ್ನು ಕೊಯ್ದು ಊಟ ಮಾಡುತ್ತಾರೆ. ನಂತರ ಬೇವಿನ ಮರದ ಹತ್ತಿರ ಮುಳ್ಳುಬಿದಿರಿನಲ್ಲಿರುವ ರಸಸಿದ್ಧನ ತಲೆಯ ಹತ್ತಿರ ನುಂಕಪ್ಪನನ್ನು ಕೂರಿಸಿ ಪೂಜಿಸುತ್ತಾರೆ. ಮತ್ತು ಬೆಳಿಗ್ಗೆ ನಾಲ್ಕುಗಂಟೆಯ ಸುಮಾರಿಗೆ 'ರಸಸಿದ್ಧನ' ತಲೆಗೆ, ವಾಲ್ಮೀಕಿ ಜನಾಂಗದವರು ಹರಳಯ್ಯನವರೂ ಸೇರಿ ಬೇಟೆಯನ್ನು ಕಡಿಯುತ್ತಾರೆ. ಇದನ್ನು 'ಗಟ್ಟಾಗಮ್ಮ' ಎಂದು ಕರೆಯುವ ಸಂಪ್ರದಾಯವಿದೆ. ದೇವರಿಗೆ ಮಾಂಸದ ಎಡೆಯನ್ನು ಹಾಕಿ ಊಟ ಮಾಡುವರು.

ನಂತರ ಬೆಳಿಗ್ಗೆ ೧೦ ಗಂಟೆಯ ಸುಮಾರಿಗೆ ಮರಳಿ ನುಂಕಪ್ಪನ ಕಟ್ಟೆಯ ಮೇಲೆ ತಂದು ಕೂರಿಸುತ್ತಾರೆ. ಈ ದಿನ ಪೂರ್ತಿಯಾಗಿ ಅಲ್ಲೇ ಇರುತ್ತದೆ. ಭಕ್ತಾದಿಗಳೆಲ್ಲಾ ಹಣ್ಣು ಕಾಯಿ ಕೊಟ್ಟು ರಾತ್ರಿಯೆಲ್ಲಾ ಭಜನೆ ಬಯಲಾಟ ಮಾಡುತ್ತಾರೆ. ಮತ್ತು ಮರುದಿನ ಬೆಳಿಗ್ಗೆ ಗೌಡರ ಮನೆಗೆ ಹೋಗಿ ಅಲ್ಲಿಂದ ವಾಲ್ಮೀಕಿ ಓಣಿಯಲ್ಲಿ ಕುಂದ್ರಿಸಿ ಹಣ್ಣು ಕಾಯಿ, ಬಟ್ಟೆ, ಕಾಸು, ಕೊಟ್ಟು ಕಳಿಸುತ್ತಾರೆ. ಇದಾದ ಮೇಲೆ ಮೂರು ಗಂಟೆಯ ಸುಮಾರಿಗೆ ಬಸವಕಟ್ಟಿಗೆ ತಂದು ಪೂಜೆ ಸಲ್ಲಿಸಿ ಆ ದಿನ ಸಾಯಂಕಾಲ ಮೊಳಕಾಲ್ಮುರಿನ ಜನರೆಲ್ಲಾ ಭೈರವ ಸ್ವಾಮಿಯನ್ನು ಗುಡ್ಡಕ್ಕೆ ಸೇರಿಸಿ ಗುಡಿತುಂಬಿಸಿ ಬರುತ್ತಾರೆ.

ಈ ಸಣ್ಣ ಜಾತ್ರೆಯನ್ನು ಮಾಡುವ ಮೊದಲು ಊರು ಮಾರಮ್ಮನನ್ನು ಮಾಡುತ್ತಾರೆ. ರಥ ಮತ್ತು ಮಾರಮ್ಮನನ್ನು ಮರದಿಂದ ತಯಾರಿಸಿ ಈ ಗಾಳಿಮಾರಮ್ಮನನ್ನು ಮೆರವಣಿಗೆಯ ಮೂಲಕ ಕರೆದುಕೊಂಡು ಹೋಗಿ ಆಂಧ್ರದ ಗಡಿ ದಾಟಿಸಿ ಬರುತ್ತಾರೆ.

## ೪.೨.೨. ಜೀವನಾವರ್ತನದ ಆಚರಣೆಗಳು

ಜೀವನಾವರ್ತನದ ಆಚರಣೆಗಳು ಮನುಷ್ಯರ ಸಂಸ್ಕೃತಿಯನ್ನು ಬಿಂಬಿಸುವಂತಹವುಗಳು. ಹಾಗೆಯೇ ಮಾನವನನ್ನು ಕ್ರಿಯಾಶೀಲಗೊಳಿಸುವ ಮತ್ತು ಜೀವಂತಿಕೆಯನ್ನು ಪ್ರತಿನಿದಿಸುವ ಪರಿಕಲ್ಪನೆಗಳೂ ಹೌದು. ತನ್ನ ಎಲ್ಲ ಸಂಭ್ರಮಗಳನ್ನು ದೈವದೊಂದಿಗೆ ಬೆಸೆದುಕೊಳ್ಳುವ ಮತ್ತು ರಾಜಿಮಾಡಿಕೊಳ್ಳುವ ಮನುಷ್ಯ-ದೈವ ಸಂಬಂಧದ ಸಾಸ್ಕೃತಿಕ ಚರಿತ್ರೆ ಈ ಮೂಲಕ ಗೋಚರವಾಗುತ್ತದೆ. ಇಂತಹ ಗೋಚರತೆಗಳು ಐತಿಹಾಸಿಕ ಚರಿತ್ರೆಯನ್ನು ಕಟ್ಟುವಲ್ಲಿ ತುಂಬಾ ಸಹಾಯಕಾರಿಯಾಗುತ್ತವೆ.

ಮದುವೆಯಾಗಿ ಸುಮಾರುವರ್ಷಗಳಿಂದ ಮಕ್ಕಳಾಗದೇ ಇದ್ದರೆ ಕೆಲವು ಹರಕೆಗಳನ್ನು ನುಂಕೇಮಲೆ ಭೈರವನಿಗೆ ಹೊತ್ತು ಕೊಳ್ಳುತ್ತಾರೆ. ಹೆಣ್ಣು ಮಕ್ಕಳು ಎರಡು ಅಥವಾ ಮೂರು ವಾರಗಳು ಈ ಹೊಂಡದಲ್ಲಿ ಸ್ನಾನ ಮಾಡಿ ಬಟ್ಟೆಯ ಮೇಲುಗಡೆಯೇ ಸ್ವಾಮಿಗೆ ಪ್ರದಕ್ಷಿಣೆ ಮಾಡುತ್ತಾರೆ. ದೇವರಲ್ಲಿ ಹೂ ಕೇಳುತ್ತಾ ತನಗೆ ಮಕ್ಕಳಾದರೆ ಹೂವಿನ ತೂಕ ಕೊಡುವೆವೆಂದೂ ಮತ್ತು ಕೆಲವರು ಬಾಳೆಹಣ್ಣು ತೂಕ ಕೊಡುತ್ತೇವೆಂದೂ ಕೆಲವರು ಹರಕೆ ಮಾಡಿಕೊಳ್ಳುತ್ತಾರೆ. ಮಕ್ಕಳಾದರೆ ಬಂದು ತಮ್ಮ ಹರಕೆಗಳನ್ನು ತೀರಿಸುತ್ತಾ ಪರವು ಮಾಡುತ್ತಾರೆ. ವಾಲ್ಮೀಕಿ ಗಳಾದರೆ ಬೇಟೆಯನ್ನು ಕೊಯ್ಯುತ್ತಾರೆ. ತಮಗೆ ಮಕ್ಕಳಾದರೆ ಸ್ವಾಮಿಗೆ ಉಡುಗೊರೆಯಾಗಿ ಬೆಳ್ಳಿಯ - ಮುಖ, ತೊಟ್ಟಿಲು, ೧೦೧, ೧೦೦೧ ರೂ ಕಾಣಿಕೆ, ಪಾದಗಳು, ಕಣ್ಣು, ಗುದ್ದು ಬಾಕು, ತ್ರಿಶೂಲ ಇವುಗಳನ್ನು ಒಪ್ಪಿಸುತ್ತಾರೆ.

**ಜವಳತೆಗೆಸುವಾಗ :**

ಕೂದಲು ತೆಗೆಸುವಾಗ ಭೈರವ ಸ್ವಾಮಿಗೆ ಅಭಿಷೇಕ ಮಾಡುತ್ತಾರೆ ನಂತರ ಗುಡಿಯೊಳಗೆ ಕರಿಯ ಕಂಬಳಿ ಗದ್ದುಗೆ ಹಾಕಿ ಅದರ ಮೇಲೆ ಅಕ್ಕಿ, ಬೇಳೆ, ಬೆಲ್ಲ, ಕತ್ರಿ, ಇವುಗಳನ್ನು ಇಟ್ಟು ಮಗು ಮತ್ತು ಮಗುವಿನ ತಾಯಿಯನ್ನು ಕೂರಿಸಿ ಇಬ್ಬರಿಗೂ ಪೂಜೆ ಮಾಡುತ್ತಾರೆ. ನಂತರ ಪೂಜಾರಿಗಳು ಎಲೆಯನ್ನು ಕತ್ತರಿತರಹ ಮಾಡಿ ಮಗುವಿನ ತಲೆಗೆ ಮೂರು ಬಾರಿ ಮುಟ್ಟಿಸಿ ತಲೆಯ ಮೇಲೆಯೇ ಹರಿದು ಹಾಕುತ್ತಾರೆ. ನಂತರ ಪರದೇಶಿಯು ಕೂದಲನ್ನು ಶಾಸ್ತ್ರೋಕ್ತವಾಗಿ ಕತ್ತರಿಸಿಸುತ್ತಾರೆ. ನಂತರ ಮಗುವನ್ನು ತೆಗೆದುಕೊಂಡು ಹೋಗಿ ಸ್ನಾನ ಮಾಡಿಸಿ ಹೊರಗಡೆ ಗದ್ದುಗೆಯ ಮೇಲೆ ಕೂರಿಸಿ ಸಾಸಿವೆ ಇಕ್ಕಿ ಮುಯ್ಯಿ ನೀಡುತ್ತಾರೆ.

**ಮದುವೆಯ ಸಂದರ್ಭದಲ್ಲಿ :**

ನುಂಕಪ್ಪನು ತಮ್ಮ ಮನೆಯದೇವರು ಎನ್ನುವವರು ಮದುವೆಯ ಸಂದರ್ಭದಲ್ಲಿ ಮದುವೆಯ ಮೊದಲು ದಿನ ಮದಲಿಂಗನು ಇಲ್ಲಿಯೇ ಬಂದು ಸ್ನಾನ ಮಾಡಿಕೊಂಡು ಹೊಸ ಬಟ್ಟೆಯನ್ನು ಹುಟ್ಟು ಪರದೇಶಿ ಸ್ವಾಮಿಗೆ ಪೂಜಾರಿಗಳಿಗೆ ಕೊಡ ಬೇಕಾದ ಅಕ್ಕಿ, ಬೇಳೆ, ಕಾಣಿಕೆ ಕೊಟ್ಟು ಎಲ್ಲಾದೇವರಿಗೂ ಪೂಜಿಸಿ ನುಂಕೇ ಭೈರವನ ದೇವಸ್ಥಾನದಲ್ಲಿ ಮದಲಿಂಗನನ್ನು ಕುಂದ್ರಿಸಿ ಕಂಕಣ ಕಟ್ಟಿಸಿಕೊಂಡು ಅಲ್ಲಿರುವ ಮಂದಿಯಲ್ಲಾ ಸಾಸಿವೆ ಇಕ್ಕಿ ಅಕ್ಕಿ ಕಾಳು ಹಾಕಿ ಮದುವೆಗೆ ನಾಂದಿ ಹಾಡುತ್ತಾರೆ. ಕೆಲವರು ಅಲ್ಲಿರುವ ಕಲ್ಯಾಣ ಮಂಟಪದಲ್ಲಿ ಮದುವೆ ಮಾಡಿಕೊಂಡು ಹೋಗುತ್ತಾರೆ. ಇಂತಪ್ಪು ದುಡ್ಡು ಎಂದು ಕಟ್ಟಿ ಊಟ ಉಪಚಾರಗಳನ್ನು ಮಾಡಿಕೊಳ್ಳುತ್ತಾರೆ. ಮುಹೂರ್ತವನ್ನು ನುಂಕಪ್ಪನ ಗುಡಿ ಮುಂದೆಯೇ ಮಾಡುತ್ತಾರೆ. ಆಗ ನವ ಜೋಡಿಗಳ ಎಲ್ಲಾ ದೇವಸ್ಥಾನಗಳಿಗೂ ಹೋಗಿ ದರ್ಶನ ಮಾಡಿಕೊಂಡು ಬರುತ್ತಾರೆ.

**ನಾಮಕರಣ ಸಂದರ್ಭದಲ್ಲಿ :**

ಮಕ್ಕಳಾದರೆ ಗಂಡುಮಗುವಾದರೆ ಸುಂಕಪ್ಪ ಸಿದ್ದಣ್ಣ, ಭೈರೇಶ್, ಮಲ್ಲೇಶ್ ಎಂತಲೂ ಹೆಣ್ಣು ಮಗುವಾದರೆ ಕರ್ಪೂರದಮ್ಮ, ಮಲಿಯಮ್ಮ, ಸುಂಕಮ್ಮ, ಸಿದ್ದಮ್ಮ, ಎಂಬುದಾಗಿಯೂ ಹೆಸರುಗಳನ್ನು ಇಡುತ್ತಾರೆ. ಈ ಹೆಸರುಗಳು ವಿಶೇಷವಾಗಿ ವಾಲ್ಮೀಕಿ ಜನಾಂಗದವರಲ್ಲಿ ಕಂಡುಬರುತ್ತದೆ. ಹರಿಜನ ಜನಾಂಗದವರಲ್ಲಿಯೂ ಸಹ ಹರಳಯ್ಯ ಎಂಬುದಾಗಿ ಹೆಸರಿಡುತ್ತಾರೆ. ಮಗುವಿಗೆ ಹೆಸರಿಡುವಾಗ ಆ ದಿನ ಸುಂಕಪ್ಪನಲ್ಲಿಗೆ ಬಂದು ಪೂಜೆ ಸಲ್ಲಿಸಿ ತೀರ್ಥ ತಂದು ತೊಟ್ಟಲಿಗೆ ಪೂಜೆ ಸಲ್ಲಿಸಿ ನಾಮಕರಣ ಮಾಡುವ ಸಂಪ್ರದಾಯವುಂಟು. ಇತ್ತೀಚಿಗೆ ಎಲ್ಲಾ ಜನ ಸಮುದಾಯದವರಲ್ಲೂ ಈ ಹೆಸರುಗಳು ಕಂಡುಬರುತ್ತವೆ.

## ೪.೨.೩. : ''ಸಿದ್ದ ಬುಕ್ತಿ''

''ಸಿದ್ದ ಬುಕ್ತಿ'' ಎನ್ನುವ ಪದ ಯೋಗಿಗಳಲ್ಲಿ ಕಂಡು ಬರುವ ಗುರುಶಿಷ್ಯರ ಸಮಾಗಮವಾಗಿದೆ 'ಸಿದ್ದ' ಎಂದರೆ ಗುಂಪಿಗೆ ಸೇರಿ . 'ಬುಕ್ತಿ' ಎಂದರೆ ಊಟ ಮಾಡುವುದು. ಗುಂಪಿಗೆ ಸೇರಿ ಊಟ ಮಾಡುವುದು ಎಂದು ಗ್ರಹಿಸಬಹುದು .

ಸಂಸಾರ ಬಂಧನದಿಂದ ಮುಕ್ತರಾಗಿ ತಮ್ಮ ತನು ಮನ ಧನವನ್ನು ಪರಮಾತ್ಮನ ಸೇವೆಗಾಗಿ ವಿನಿಯೋಗಿಸುವರೋ ಅವರನ್ನು ಸಿದ್ದ ಸಮಾಜ ಅಥವಾ ಸಿದ್ದ ಸಂಘ ಶ್ವೇತರ್ಷಿ ಸಂಘ (white lodge) ಎಂದು ಕರೆಯುವರು. ಈ ಸಮಾಜಕ್ಕೆ ಶಿಷ್ಯರನ್ನು ಸೇರಿಸಿಕೊಳ್ಳುವ ಸಮಾಗಮಕ್ಕೆ 'ಸಿದ್ದಬುಕ್ತಿ' ಎಂದು ಹೆಸರು. ಹೀಗೆ ಬ್ರಹ್ಮಾಚಾರ್ಯ ಯೋಗಿಗಳ ಸಂಘಕ್ಕೆ ಸೇರಿ ಔತಣ ಕೂಟನಡಿಸಲೋಸುಗ ಜನರಿಗೆ ಅನ್ನ ಸಂತರ್ಪಣೆ ಮಾಡಿಸುತ್ತಿದ್ದರು . ಕ್ರಮೇಣ ವಾಲ್ಮೀಕಿ ಜನಾಂಗದವರು ಅದೇ ಸಿದ್ದ ಬುಕ್ತಿಯ ಆಚರಣೆ ಯನ್ನು ಹಿಂಸಾಪೂರ್ವಕವಾದ ವಾಮಾಚಾರ ಮಾರ್ಗಕ್ಕೆ ತಿರುಗಿಸಿದ್ದಾರೆ ಎನ್ನಬಹುದು.[1] ಇದನ್ನು ನಮ್ಮಲ್ಲಿ ಕೆಲವರು ಈಗುರುಶಿಷ್ಯರ ಸಮಾಗಮ (ಸಾಧು ಗೋಷ್ಠಿಯ) ಭೋಜನವನ್ನು ಬಂಡಾರ ಎಂದು ಕರೆಯುವರು. ಈ ಭಾಗದಲ್ಲಿ ಜಾದ್ದಮತ ಪ್ರಾಬಲ್ಯವು ಕಡಿಮೆಯಾದ ನಂತರ ಈ ಯೋಗ ಪಂಥದ ಭಕ್ತಿಯ ರೂಪರೇಶಗಳೇ ಬದಲಾಗಿ ಬಂದಿರ ಬಹುದು .

ಮೌಖಿಕ ಚರಿತ್ರೆಯ ಪ್ರಕಾರ ಸುಂಕೇ ಮಲಿ ಬೈರವನು ಸಹ ಒಂದು ಕಾಲದಲ್ಲಿ ಈ ಗುಂಪಿಗೆ ಸೇರಿದ್ದಾನೆಂದು ಹೇಳಿಕೆಯ ಪ್ರಕಾರ ಇದರ ಸಮಾಗಮದ ಹಿನ್ನಲೆಯಾಗಿ ಭಕ್ತನಾದ ಕಾಟಣ್ಣನವರು ಸಿದ್ದುಬುಕ್ತಿಯನ್ನು ಆಚರಿಸುತ್ತಾರೆ . ಅದೇ ರೀತಿ ಬೈರವನ ಗುರುವಾಗಿ ಯೋಗಿ ಜೋಗಿ ( ಗೋರಕ್ಷ ನಾಥ ) ಯಾಗಿ ಕಂಡು ಬರುತ್ತಾನೆ .

ಶ್ರೀ ಸುಂಕೆ ಮಲೆ ಸಿದ್ದೇಶ್ವರ ಚರಿತ್ರೆಯಲ್ಲಿ ಈತನ ಭಕ್ತನಾಗಿ ಬೇಡರ ಜನಾಂಗದ ಕಾಟಣ್ಣ ವೃತ್ತಾಂತವು ಕಂಡು ಬರುತ್ತದೆ , ಈತನ ವಂಶಸ್ಥರು ಎಂದು ಹೇಳಿಕೊಳ್ಳುವವರಿದ್ದಾರೆ . ಇವರು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ನಾಯಕನ ಹಟ್ಟಿ ಹೋಬಳಿಯ ರಾಮದುರ್ಗ (ದೊಡ್ಡ ಮಾಂಡ್ಲಹಟ್ಟಿ ) ಎಂಬ ಗ್ರಾಮದಲ್ಲಿ ವಾಸವಾಗಿದ್ದು ತಾವು ಕಾಟಣ್ಣನ ವಂಶಸ್ಥರು ಎಂದೂ ಹೇಳಿಕೊಳ್ಳುತ್ತಾರೆ . ಅವರು ಹೇಳುವ ಪ್ರಕಾರ ಸುಮಾರು 60 ಮನೆಗಳಿವೆ. ಭೈರವನು ಸುಂಕೇಮಲೆಯಲ್ಲಿ ಐಕ್ಯಗೊಳ್ಳುವ ಸಂಧರ್ಭದಲ್ಲಿ ಸ್ವಾಮಿಯ ಆಜ್ಞಾನುಸಾರವಾಗಿ ಕಾಟಣ್ಣನು ಕೊನೆಗೆ ದೊಣಮಾಂಡ್ಲ ದಟ್ಟಿಗೆ ಬಂದು ನೆಲೆಸುತ್ತಾನೆ.

ಹೀಗೆ ನೆಲೆಸಿದ ನಂತರ ಈತನ ವಂಶವು ವ್ಯಾಪಕವಾಗಿ ಬೆಳೆಯುತ್ತದೆ. ಇದರ ಕುರುಹಾಗಿ ಈ ಹಟ್ಟಿಯ ಪಕ್ಕದಲ್ಲಿ 'ಹೊಸಗುಡ್ಡ' ವೆಂಬ ಸ್ಥಳದಲ್ಲಿ ಭೈರವ ವಿಗ್ರಹ, ಈಶ್ವರನ ಲಿಂಗ, ಕಾಟಣ್ಣನ ವಿಗ್ರಹ ಹಾಗೂ ನಾಯಿಯ ವಿಗ್ರಹ - ಇವುಗಳನ್ನು ನೋಡಬಹುದು ಹಾಗೂ ಇವರ ೬೦ ಮನೆಗಳಲ್ಲಿಯೂ ಸಹ ಕಾಟಣ್ಣ, ಸುಂಕಣ್ಣ , ಸಿದ್ದಣ್ಣ ಎಂಬ ಹೆಸರುಗಳು ಸಾಮಾನ್ಯವಾಗಿ ಕಂಡುಬರುತ್ತದೆ. ಇವರನ್ನು ಕಾವಲುಗಾರರು ಎಂದು ಕರೆಯುತ್ತಾರೆ.) ಈಗ ಖಾಸಾ ಮೂಲ ವಂಶಸ್ಥನೆಂದು ಹೇಳಿಕೊಳ್ಳುವ ಗ್ರಾಮ ಪಂಚಾಯ್ತಿಯ ಅಧ್ಯಕ್ಷನೂ ಆದ ಗೊಂಚಿಕಾರ ಕಾವಲಯ್ಯ ಈತನ ವಿಚಾರವಾಗಿ ತಿಳಿಯಬಹುದು.

ಈ ಹಟ್ಟಿಯಲ್ಲಿ 'ನಾಯಕ' ಜನಸಮುದಾಯದವರು ಈ ಸ್ವಾಮಿಯ ಕ್ಷೇತ್ರದಲ್ಲಿ ''ಸಿದ್ದಬುಕ್ತಿ'' ಎಂದು ವಿಶೇಷವಾಗಿ ಆಚರಿಸುತ್ತಾರೆ. ಹಾಗೂ ಇವರ ಹಟ್ಟಿಯಿಂದ ಒಪ್ಪತ್ತಿನಿಂದ ಹಾಲು, ತುಪ್ಪವನ್ನು ಮೀಸಲು ಎಂದು ಬರಿಗಾಲಿನಿಂದ ನಡೆದುಕೊಂಡು ಹೋಗಿಯೇ ಅರ್ಪಿಸಿ ಬರುತ್ತಾರೆ. ಇವರು ಅಲ್ಲಿಗೆ ಹೋದಾಗ ಹರಳಯ್ಯ ಗುಂಪಿನವರು ಅಡ್ಡ ಬಂದು ನಗಾರಿಯನ್ನು ಬಡಿಯುತ್ತಾ ಸ್ವಾಗತ ಮಾಡಿ ಕೊಳ್ಳುತ್ತಾರೆ. ಇವರು ವಿಶೇಷವಾಗಿ ಕಾರಹುಣ್ಣಿಮೆಯ ಮಾಸದಲ್ಲಿ 'ಸಿದ್ದಬುಕ್ತಿ' ಯ ಸಂಪ್ರದಾಯವನ್ನು ಮಾಡುತ್ತಾರೆ. ಸ್ವಾಮಿಗೆ ಟಗರು ಅಥವಾ ಓತು ಗಳನ್ನು ಮಾತ್ರ ಕೊಯ್ಯುತ್ತಾರೆ ಹೆಣ್ಣು ಪ್ರಾಣಿಗಳನ್ನು ಕೊಯ್ಯುವುದಿಲ್ಲ. ಇವರು ಕೊಯ್ಯುವ ಬೇಟೆಗಳು ಜೋಗಿಗೆ (ಗೋರಕ್ಷನಾಥ) ಮಾತ್ರಸಲ್ಲುತ್ತವೆ. ಏಕೆಂದರೆ ಸಿದ್ಧೇಶ್ವರನಿಗೂ ಹಾಗೂ ಕಾಟಣ್ಣ ನವರಿಗೂ ಗೋರಕ್ಷನಾಥನೇ ಗುರುವಾಗಿರುತ್ತಾನೆ. ಈ ಹಟ್ಟಿಯಲ್ಲಿರುವ ನಾಯಕ ಜನಾಂಗದವರು ತಮಗೆ ಒಳ್ಳೆಯದಾದರೆ ಸ್ವಾಮಿಗೆ ''ಸಿದ್ದಬುಕ್ತಿ''ಯನ್ನು ಮಾಡುತ್ತೇವೆ ಎಂದು ಹರಕೆ ಹೊರುತ್ತಾರೆ. ಅವರು ಒಂದೊಂದು ಬಾರಿ ಒಟ್ಟಾಗಿ ಗಾಡಿಸವಾರಿಗಳೊಂದಿಗೆ ಹೋಗುವುದುಂಟು ಗಾಡಿಗೊಂದು ಬೇಟೆಯಂತೆ ಸುಮಾರು ಬೇಟೆಗಳನ್ನು ಕೊಯ್ದು ಅಲ್ಲಿಯೇ 'ಪಶವು' ಮಾಡಿ ತಮ್ಮ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಇವರು ಮೀಸಲು ತೆಗೆದುಕೊಂಡು ಹೋಗಿ ಸ್ವಾಮಿಗೆ ಅರ್ಪಿಸಿ ಹಾಗೆಯೇ ಹಿಂದಕ್ಕೆ ನೋಡದಹಾಗೆ ಬರುವ ಪದ್ದತಿಯುಂಟು.) ಇವರು ಅಲ್ಲಿಗೆ ಹೋದಾಗ ಪೂಜಾರಿಗಳು ಎಲ್ಲರೂ ಸಹ ಹೊರಗಡೆ ಬಂದು ಅವರನ್ನು ಸ್ವಾಗತಿಸುತ್ತಾರೆ.

'ಸಿದ್ದಬುಕ್ತಿ'ಮಾಡುವಾಗ ಪರದೇಶಿಯು ಭೈರವ ಸ್ವಾಮಿಯನ್ನು ಪಶ್ಚಿಮದಿಕ್ಕಿನ ಹೊಂಡದ ಮೇಲ್ಗಡೆಯ ಕಡೆಗೆ ತರುತ್ತಾನೆ ನಂತರ ಹರಳಯ್ಯನು ನಗಾರಿಯನ್ನು ಮುಂದೆ ಮುಂದೆ ಬಡಿಯುತ್ತಾ ಬಂದು ಅಲ್ಲಿ ಒಂದು ತಂಗಟೆ ಗಿಡದ ಹತ್ತಿರ ಕರಿಯ ಕಂಬಳಿ ಗದ್ದುಗೆಯನ್ನು ಹಾಕಿ ಸ್ವಾಮಿಯನ್ನು ಕೂರಿಸುತ್ತಾರೆ. ನಂತರ ಜೋಗಿಯ ಗುಡಿಯೊಳಗಿರುವ ತ್ರಿಶೂಲವನ್ನು ಅಕ್ಷಯ ಪಾತ್ರೆಯನ್ನು ಅರಳಯ್ಯನ ಪಾತ್ರೆಯನ್ನು ಗದ್ದುಗೆಯ ಮೇಲೆ ಇಡುತ್ತಾರೆ. ಅದರ ಮುಂದೆ ಬೇಟೆಗಳನ್ನು ಕೊಯ್ದು ಎಡೆಹಾಕುವರು ಮೊದಲು ಮಾಂಸದ ಮೂರು ತುಂಡುಗಳನ್ನು ಸುಟ್ಟು ಹಸಿದಾದ ತಂಗಟೆಗಿಡಕ್ಕೆ ಎಡೆಹಾಕುವರು ಹಾಗೂ ಗದ್ದುಗೆಯ ಮೇಲೆ ಅಕ್ಷಯ ಪಾತ್ರೆಗೂ ಹರಳಯ್ಯನ ಪಾತ್ರೆಗಳಿಗೂ ಮಾಂಸದ ಸಾರನ್ನು ಎಡೆ ಹಾಕುವರು ಹಾಗೂ ಸ್ವಾಮಿಗಾಗಿ ಒಂದು ಬ್ರಾಂದಿ ಬಾಟ್ಲಿಯನ್ನು ಒಂದಿಡಿ ಬಂಗೆಯ ತಪ್ಪಲನ್ನೂ ಇಡುವರು. ಈ ಬ್ರಾಂದಿಯಿಂದ ದೀಪ ಹಚ್ಚುತ್ತಾರೆ ಈ ಬ್ರಾಂದಿಯು ರಕ್ಕಸರಲ್ಲಿರುವ ವಿಷದ ಸಂಕೇತವಾಗಿರುತ್ತದೆ.

ಗದ್ದುಗೆಯ ಮೇಲೆ ಅಕ್ಕಿ, ರಾಗಿ, ಜೋಳ, ಹಲವು ಧಾನ್ಯಗಳನ್ನು ಹಣ್ಣು, ಕಾಯಿ, ಕಾಸು ಇಟ್ಟು ಬಂದಿರುವವರೆಲ್ಲಾ ತಮ್ಮ ಸೇವೆ ಸಲ್ಲಿಸುತ್ತಾರೆ. ಹಾಗೂ ಹರಳಯ್ಯನಿಗೆ ಕೊಂಡಿಹಣವನ್ನು ನೀಡಲಾಗುವುದು.

ಈ ಪೂಜೆಗಿಂತ ಮೊದಲು ಎಲ್ಲರೂ ಸಹ ಹೊಂಡದಲ್ಲಿ ಸ್ನಾನ ಮಾಡುವರು. ನಂತರ ಜೋಗಿಯ ಪೂಜಾರಿಗಳು (ಕಾವಲು ಗಾರರು) ಎಡೆಹಾಕಿದ ಪಾತ್ರೆಯನ್ನು ತೆಗೆದುಕೊಂಡು ಹೋಗಿ ಜೋಗಿಯ ಪ್ರಸಾದವೆಂದು ಹಂಚಿ ಊಟ ಮಾಡುತ್ತಾರೆ. ಹರಳಯ್ಯನೂ ಸಹ ತನ್ನ ಪಾತ್ರೆಯನ್ನು ತೆಗೆದುಕೊಂಡು ಹೋಗಿ ಊಟ ಮಾಡುತ್ತಾನೆ. ನಂತರ ಸಿದ್ದಬುಕ್ತಿಗೆ ೧೦೧ ರೂ ಕಾಣಿಕೆಯನ್ನು ಪರದೇಶಿಗೆ ಕಟ್ಟಬೇಕು. ಇದು ಕಪ್ಪುಕಾಣಿಕೆ ಎನ್ನುವ ಹಿನ್ನೆಲೆಯಲ್ಲಿ ಈ ಧನವನ್ನು ಕಟ್ಟಿಸಿಕೊಳ್ಳಲಾಗುತ್ತದೆ. ನಂತರ ಮಾಂಸದ ಅಡಿಗೆಯನ್ನು ಊಟಮಾಡುವಾಗ ಗೊರವರು (ಹರಿಜನ) ಕಾವಲರು (ನಾಯಕ), ಗೊಲ್ಲರು ಮಡಿವಾಳರು, ಕುರುಬರು ಎಲ್ಲಾ ಜನಾಂಗದವರೂ ಸಹ ಭಾಗವಹಿಸುತ್ತಾರೆ. ಹಾಗೂ ಬಂದಿರುವ ಹೆಣ್ಣು ಮಕ್ಕಳೆಲ್ಲಾ ಕರ್ಪೂರದಮ್ಮನಿಗೆ ವಿಶೇಷವಾದ ಪೂಜೆಯನ್ನು ಸಲ್ಲಿಸುತ್ತಾರೆ. ನಂತರ ಕುಮುತಿ ಯಿಂದ ಬಂದು ಕರ್ಪೂರದಮ್ಮ ಮತ್ತು ಕಾಟಣ್ಣನವರು ಪಗಡೆಯಾಡಿರುವ ಜಾಗವೆಂದು ಹೇಳುವ ಸ್ಥಳಕ್ಕೂ ಕಾಟಣ್ಣನ ಕಡೆಯವರು ಈಗಲೂ ಸಹ ಎಡೆ ಹಾಕುವ ಸಂಪ್ರದಾಯವಿದೆ.

ಅದರ ಕುರುಹಾಗಿ ಹೌದೆಂಬಂತೆ ನಗಾರಿ ಬಂಡೆಯನ್ನು ಅದರ ಹಿಂದಕ್ಕೆ ಕಾಟಣ್ಣ ಕರ್ಪೂರದಮ್ಮನವರು ಪಗಡೆಯಾಟ ಆಡಿದ ಕೆಲವು ಗುರುತುಗಳು ಕಾಣುತ್ತವೆ. ಹಾಗೂ ಕರ್ಪೂರದಮ್ಮನ ಕಿಂಡಿ ಎಂದು ಕರೆಯುವ ಸ್ಥಳದ ಒಂದು ಬಂಡೆಯ ಮೇಲೆ ಕಾಟಣ್ಣನ ಗುಂಪಿನವರು 'ನಾಯಿ' ಎಡೆಯೆಂದು ಹಾಕುವ ಸಂಪ್ರದಾಯವಿದೆ ಸಿದ್ದಬುಕ್ತಿ ಸಂದರ್ಭದಲ್ಲಿ ಈ ಸ್ಥಳಕ್ಕೆ ಮಾಂಸದ ಎಡೆಯನ್ನು ನಾಯಿಗಳಿಗೆ ಹಾಕುತ್ತಾರೆ. ಇದು ಕಾಟಣ್ಣನಲ್ಲಿ ೧೦೧ ನಾಯಿಗಳಿದ್ದವು ಎಂಬ ಸಂಕೇತವನ್ನು ಸೂಚಿಸುತ್ತದೆ. ರಕ್ತ ಬೀಜಾಸುರ ಅಂಗ್ಸನೆಂಬ ದೈತ್ಯನನ್ನು ಸಂಹಾರಮಾಡಲು ಕರ್ಪೂರದಮ್ಮ ದಾರಿಕಾಣದೆ ಒಂದು ಬಂಡೆಯನ್ನು ತನ್ನ ಒನಕೆಯಿಂದ ಹೊಡೆದು ಕಿಂಡಿಯನ್ನು ಮಾಡಿಕೊಂಡು ಕಾಟಣ್ಣನ ೧೦೧ ನಾಯಿಗಳ ಸಮೇತ ಹೋಗಿ ಸಂಹರಿಸುತ್ತಾಳೆ - ಈ ಹಿನ್ನೆಲೆಯಾಗಿ ಆ ಕಿಂಡಿಯ ಹತ್ತಿರ ನಾಯಿಗಳಿಗೆ ಎಡೆ ಹಾಕುವ ಸಂಪ್ರದಾಯವಿದೆ.

ನಂತರ ಕಾಟಣ್ಣನ ಗುಂಪಿನವರು ಹಿಂದಿರುಗಿ ಹೋಗುವಾಗ ಪರದೇಶಿ (ಸ್ವಾಮಿ)ಯು ಇವರ ಖರ್ಚಿಗಾಗಿ ಧಾರಿಭತ್ಯೆ ನೀಡಲಾಗುವುದು. ಇವರು ಸ್ವಾಮಿಯ ಕ್ಷೇತ್ರದಿಂದ ತಂದಿರುವ ತೀರ್ಥವನ್ನು ದನ, ಕುರಿ,ಮನೆ, ಹೊಲಕ್ಕೆ ಚೆಲ್ಲುತ್ತಾರೆ - ಹೀಗೆ ಚೆಲ್ಲುವುದರಿಂದ ದನ, ಕುರಿ ಗಳಿಗೆ ಹಾಗೂ ಬೆಳೆಗಳಿಗೆ ಯಾವುದೇ ರೋಗ ಬರುವುದಿಲ್ಲವೆಂದೂ ಹಾಗೂ ಮನುಷ್ಯರು ಈ ತೀರ್ಥವನ್ನು ಸೇವಿಸಿದರೆ ಬಂದ ರೋಗಗಳು ವಾಸಿಯಾಗುತ್ತವೆಂಬ ನಂಬಿಕೆಯಿದೆ ಮನೆಗಳಲಲ್ಲಿ ಯಾವಾಗಲೂ ಸಹ ತೀರ್ಥವಿರುತ್ತದೆ.

ಪರದೇಶಿ (ಸ್ವಾಮಿ)ಯು ಕಾಟಣ್ಣನವರ ಊರಿಗೆ ಬಂದಾಗ ಕಪ್ಪಕಾಣಿಕೆ ವಸ್ತ್ರಗಳು ಕೊಟ್ಟು ನಂತರ ಮಠದಲ್ಲಿರುವ ಅರಳಯ್ಯನವರಿಗೂ ಕೊಂಡಿದುಡ್ಡು ಮತ್ತು ಕಾವಲುಗಾರರಿಗೆ ಹಣವನ್ನು ಕೊಟ್ಟು ಕಳಿಸುತ್ತಾರೆ. ನಂತರ ಪರದೇಶಿಯು ಮಠದಲ್ಲಿ ಸತ್ತಾಗ ಕಾಟಣ್ಣನ ಗುಂಪಿನವರೂ ಸಹ ತಿಥಿ (ಕರ್ಮ) ಮಾಡಿಕೊಳ್ಳುವ ಸಂಪ್ರದಾಯವಿದೆ.

ಒಟ್ಟಿನಲ್ಲಿ ಸುಂಕೇಮಲೆ ಸಿದ್ದೇಶ್ವರನ ಕ್ಷೇತ್ರದಲ್ಲಿ ಕಾಟಣ್ಣನವರ ಗುಂಪಿನವರಿಗೆ ವಿಶೇಷವಾದ ಸ್ಥಾನಮಾನಗಳಿವೆ.

'ಸಿದ್ದುಬುಕ್ತಿ' ಆಚರಣೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಸೂಕ್ಷ್ಮವಾದ ಹೊಳಹು ದೊರೆಯುತ್ತದೆ. ಚಳ್ಳಕೆರೆ ತಾಲ್ಲೂಕಿನ ನಾಯಕನ ಹಟ್ಟಿ ಬಳಿಯಿರುವ ದೊಣಮಾಂಡ್ಲಹಕಟ್ಟಿಯಲ್ಲಿ (ರಾಮಸಾಗರ) ನೆಲೆಸಿರುವ ಕಾಟಣ್ಣನ ವಂಶಜರು ಕಾರಹುಣ್ಣಿಮೆಯ ಸಂದರ್ಭದಲ್ಲಿ ಶ್ರೀ ಪರ್ವತಕ್ಕೆ ಸಿದ್ದುಬುಕ್ತಿಮಾಡಲು ಬರುತ್ತಾರೆ ಅವರನ್ನು ಹರಳಯ್ಯನ ವಂಶಜರು ಹಲಗೆ ಬಡಿಯುತ್ತಾ ಸ್ವಾಗತಕೋರುತ್ತಾರೆ. ಹೀಗೆ ಭಕ್ತಿಯ ಆವೇಶದಲ್ಲಿ ಬಂದಾಗ ಈಗ ಈ ಮಠದಲ್ಲಿ ಇರುವ ಲಿಂಗಾಯಿತ ಪೂಜಾರಿಗಳು ಮಠವನ್ನು ಬಿಟ್ಟು ಹೊರಗಡೆ ಬರುತ್ತಾರೆ. ಈ ಮೊದಲೇ ಮಾಡಿದ ಪೂಜೆಯನ್ನು ಕೆಡಿಸಿ ತಾವು ದೇವರಿಗೆ ಸ್ನಾನ ಮಾಡಿಸಿ ಹೊಸದಾಗಿ ಪೂಜೆ ಮಾಡುತ್ತಾರೆ. ಅನಂತರ ದೇವರನ್ನು ತೆಗೆದುಕೊಂಡು ತಾವು ಬೀಡು ಬಿಟ್ಟಲಿಗೆ ದೇವರನ್ನು ಒಯ್ದು ಕೂರಿಸಿ ಪೂಜೆ ಮಾಡಿ ಮಾಂಸದ ಹೆಡೆಯನ್ನು ಹಾಕುತ್ತಾರೆ.

ಇಲ್ಲಿ ಲಿಂಗಾಯಿತ - ವಾಲ್ಮೀಕಿ ಜನಾಂಗದ ಸಾಂಸ್ಕೃತಿಕ ಸಂಘರ್ಷವನ್ನು ಕಾಣಬಹುದಾಗಿದೆ. ಏಕೆಂದರೆ ಕಾವಲರು ಬರುತ್ತಲೂ ಲಿಂಗಾಯಿತ ಪೂಜಾರಿಗಳು ಮಠವನ್ನೇ ತೊರೆಯುತ್ತಾರೆ. ಬಹಶಃ ಇದರಿಂದ ತಿಳಿಯುವುದೇನೆಂದರೆ ತಮ್ಮದಲ್ಲದ ಮಠದಲ್ಲಿ ತಾವು ಪೂಜಿಸಲು ಶಕ್ಯವಲ್ಲ ಮೂಲತಃ ಈ ಮಠದ ವಾಲ್ಮೀಕಿ ಸಮುದಾಯಕ್ಕೆ ಸೇರಿದ್ದೆಂದು ಗೊತ್ತಾಗುತ್ತದೆ. ಹಾಗೆ ನೋಡಿದರೆ ಈ ಪೂಜೆಸುತ್ತಿರುವ ಲಿಂಗಾಯಿತ ಸಮುದಾಯದ ಪೂಜಾರಿಗಳಿಗೆ ಪೂಜೆ ಮಾಡಲು ಯಾವುದೇ ಲಿಖಿತಾಧಾರಗಳೂ ಇಲ್ಲ. ಮೇಲಾಗಿ ನುಂಕೆ ಮಲೆಸಿದ್ದೇಶ್ವರ ಚರಿತ್ರೆಯನ್ನು ಅವಲೋಕಿಸಿದರೆ ಎಲ್ಲಿಯೂ ಲಿಂಗಾಯತ ಸಮುದಾಯದ ಪ್ರಸ್ತಾಪ ಕಾಣುವುದಿಲ್ಲ. ಶ್ರೀಮಠ ಬೆಳಕಿಗೆ ಬಂದಾಗಿನಿಂದ ಉಜ್ಜಯಿನಿ ಪೀಠದ ಸ್ವಾಮೀಜಿಗಳು ಲಿಂಗಾಯತರನ್ನು ಪೂಜೆಮಾಡಲು ನೇಮಿಸಿರುವುದಾಗಿ ಪೂಜಾರಿಗಳು ಹೇಳುತ್ತಾರೆ.

ಹಾಗಾಗಿ ಜಾತಿಜಾತಿಗಳ ಕೊಡುಕೊಳ್ಳಿಗಳಿಂದಾಗಿ ಇಂತಹ ಒಂದು ಜಾತಿ ಸಾಮರಸ್ಯದ ಸಂಕೇತ ಸಾಧ್ಯವಾಗಿರಬಹುದು ಹಾಗಾಗಿ ಇಲ್ಲಿ ಲಿಂಗಾಯಿತರು ಮತ್ತು ವಾಲ್ಮೀಕಿ ಸಮುದಾಯದ ಅತ್ಯಂತ ಅನ್ಯೋನ್ಯ ಭಾವನೆಯಿಂದ ಬದುಕುತ್ತಿದ್ದಾರೆ. ಕೆಲವು ಆಚರಣೆ - ನಂಬಿಕೆ ವಿಧಿ ನಿಶೇಧಗಳ ಮೇಲೂ ಲಿಂಗಾಯಿತ ಧರ್ಮ ಪ್ರಭಾವವನ್ನು ಕಾಣಬಹುದಾಗಿದೆ. ಮೊದಲು ಸಿದ್ಧಭುಕ್ತಿ ಮಾಡುವಾಗ ಮಾಂಸದ ಹೆಡೆಯನ್ನು ದೇವಸ್ಥಾನದ ಒಳಗೆಯೇ ಮಾಡುತ್ತಿದ್ದರು. ಆದರೆ ಈಗ ಈ ಪದ್ಧತಿ ನಿಂತಿದೆ. ದೇವರನ್ನೇ ಸಿದ್‌ಭಕ್ತಿ ಮಾಡುವಲ್ಲಿಗೆ ಕರೆದೊಯ್ದು ಭಕ್ತಾದಿಗಳ ಬಿಡಾರದ ಬಳಿ ಸ್ಥಾಪಿಸಿ ಅಲ್ಲಿಯೇ ಎಡೆ ಹಾಕುವುದನ್ನು ಕಾಣಬಹುದಾಗಿದೆ. ಇದರಿಂದಾಗಿ ತಿಳಿಯುವುದೇನೆಂದರೆ ಮಾಂಸಹಾರಿಗಳಿಲ್ಲದ ಲಿಂಗಾಯಿತರು ಮಠದಲ್ಲಿ ಮಾಂಸದ ಎಡೆ ಮಾಡುವುದನ್ನು ನಯವಾಗಿಯೇ ತಿರಸ್ಕರಿಸಿ, ಪವಿತ್ರತೆಯ ನೆಪಮಾಡಿ ಇಂದು ಸಿದ್ದುಭುಕ್ತಿ ಎಡೆಯನ್ನು ಹೊರಗಡೆ ಮಾಡುವಂತೆ ಮಾಡಿರುವುದು ತಿಳಿಯುತ್ತದೆ. ಹಾಗಾಗಿ ಮೂಲತಃ ಮಾಸಬೇಡರ ಸಂಸ್ಕೃತಿಯನ್ನು ಬಂದಿರುವ ಮಠವಾಗಿದ್ದ ನುಂಕೆ ಮಲ್ಲೆಸಿದ್ಧೇಶ್ವರ ಆಚರಣೆಗಳಲ್ಲಿ ಲಿಂಗಾಯತರ ಮಧ್ಯ ಪ್ರವೇಶಿಕೆಯನ್ನು ಕಾಣಬಹುದಾಗಿದೆ. ಹೀಗಾಗಿ ಇದೊಂದು ಸಾಂಸ್ಕೃತಿಕ ಕೊಡುಕೊಳ್ಳಲು ಪರಿಣಾಮ ಎಂದು ತಿಳಿದರೂ ಸಮಾಜದ ಮೇಲ್ವರ್ಗದವರು ಪ್ರಭುತ್ವ ಸಾಧಿಸುವ ಒಳಸಂಚೂ ಕೂಡ ಎಂದು ಮೇಲ್ನೋಟಕ್ಕೆ ತಿಳಿದು ಬರುತ್ತದೆ. ಆದಕಾರಣ ದೇವಸ್ಥಾನದ ಒಳಗಡೆ ಮಾಂಸದ ಎಡೆ ಹಾಕಬಾರದು ಎನ್ನುವ ನಿಷಿದ್ಧ ಇತ್ತೀಚಿನದಾಗಿದೆ. ಇದರ ಹಿಂದೆ ಲಿಂಗಾಯಿತರ ಪ್ರಭಾವವೂ ಇದೆ.

## ೪.೨.೪. ಪವಾಡಗಳ ಹಿಂದಿನ ಸ್ವರೂಪ

ನಮಗೆ ಸಾಧ್ಯವಾಗದ ಯಾವುದೇ ಕಾರ್ಯಗಳು ದೈವದ ಮಹಿಮೆಯಿಂದ ಅಥವಾ ಮಾಯಾಮಂತ್ರದಿಂದ ಆಗುವ ವಿಶೇಪ ಕಾರ್ಯವನ್ನು ಪವಾಡ ಎಂದು ಕರೆಯಬಹುದು. ಪವಾಡಗಳು ದೈವದ ಮೇಲಿರುವ ನಂಬಿಕೆಯನ್ನು ಇಮ್ಮಡಿಗೊಳಿಸುತ್ತವೆ. ದೈವದೊಂದಿನ ಸಂಬಂಧವನ್ನು ಗಟ್ಟಿಗೊಳಿಸುತ್ತವೆ. ಪವಾಡಗಳನ್ನು ವೈಜ್ಞಾನಿಕ ವಿಶ್ಲೇಪಣೆಗೆ ಬರೆಗಟ್ಟಿದರೆ ಹುರುಳಿಲ್ಲದಿರಬಹುದು ಆದರೆ ಜನರಲ್ಲಿನ ಗಾಢವಾದ ನಂಬಿಕೆಗಳು ಪವಾಡ ಸಾದೃಶ್ಯಗಳನ್ನು ಸೃಷ್ಟಿಸುತ್ತವೆ. ಮನೋವಿಶ್ಲೇಪಣೆಯ ಮೂಲಕ ನೋಡುವುದಾದರೆ 'ಪವಾಡ'ದ ಹಿಂದಿರುವ ಅಗಾಧವಾದ ಶಕ್ತಿಯೆಂದರೆ ಗಾಢವಾದ ಅಚಲವಾಗಿ ಬೇರೂರಿದ 'ನಂಬಿಕೆ'ಯೇ ಆಗಿದೆ. ಅಂತಹ ಒಂದು ನಂಬಿಕೆ ಇಲ್ಲಿನ ಪವಾಡಗಳಲ್ಲಿ ಕಾಣಬಹುದು.

ಈ ಪವಾಡಗಳು ಸಾಮಾನ್ಯವಾಗಿ ದೈವದ ಹಿನ್ನೆಲೆಯಲ್ಲಿ ನಡೆಯುವಂತವು ಉದಾಹರಣೆಯಾಗಿ ನೋಡುವುದಾದರೆ ಹುಲಿಗೆಮ್ಮನ ಜೋಗಿತಿಯರು ತಲೆಯ ಮೇಲೆ ಯಾವುದೇ ಆಧಾರವಿಲ್ಲದೆ ನೀರಿನ ಕೊಡವನ್ನಿಟ್ಟುಕೊಂಡು ಕುಣಿಯುತ್ತಾರೆ. ಹೀಗೆ ಈ ದೈವದ ಭಕ್ತಿಯಲ್ಲಿ ತಲ್ಲೀನರಾಗಿ ಜಗತ್ತನ್ನೇ ಮೈಮರೆತು ಅಸಾಧ್ಯವಾದುದನ್ನು ಸಾಧಿಸುವುದರ ಮೂಲಕ ಅಚ್ಚರಿಯನ್ನುಂಟು ಮಾಡುವ ಕೆಲವು ಪವಾಡಗಳು ನಡೆಯುತ್ತವೆ.

ಯಾವುದೇ ಜನಪದ ದೈವಗಳು ಪ್ರಸಿದ್ಧಿಯನ್ನು ಪಡೆದಿರುವುದಕ್ಕೆ ಕಾರಣ ಅಲ್ಲಿ ನಡೆದುಕೊಂಡು ಬಂದಿರುವ ವಿಶಿಷ್ಠ ಪವಾಡಗಳಿಂದ ಈ ಪವಾಡಗಳು ಮಾನವನಿಗೆ ಭಕ್ತಿಯನ್ನು ಮೂಡಿಸುತ್ತದೆ. ಅಂದಿನಿಂದ ಇಂದಿನವರೆಗೂ ನುಂಕೇ ಭೈರವನ ಪವಾಡಗಳನ್ನು ನಮ್ಮ ಜನಪದರು ನಂಬಿಕೆಯ ಮೂಲಕ ತೋರಿಸುತ್ತಾ ಬಂದಿದ್ದಾರೆ. ಪಕ್ಕದ ದೇವ ಸಮುದ್ರದಲ್ಲಿ ರಾಜಕಾರಣಿ ಬಿ.ಟಿ.ರುದ್ರಮ್ಮನವರ ಮಗನಿಗೆ ಮದುವೆಯಾಗಿ ೧೧ ವರ್ಪ ಕಳೆದರೂ ಮಕ್ಕಳಾಗಲಿಲ್ಲವಂತೆ ನುಂಕಪ್ಪನು ಈತನಿಗೆ ಮನೆದೇವರೂ ಸಹ ಆಗಿದ್ದನು. ತನಗೆ ಮಕ್ಕಳಾದರೆ ಕಲ್ಯಾಣ ಮಂಟಪವನ್ನು ನಿರ್ಮಿಸುತ್ತೇವೆಂದು ಹರಕೆ ಹೊತ್ತಿದ್ದರು ಮರುವರ್ಪ ಹೆಣ್ಣು ಮಗುವಾಯಿತು. ಈಗ ಆ ಮಗುವಿಗೆ 'ಅಪರೂಪ' ಎಂದು ಹೆಸರಿಡಲಾಯಿತು ಅಂದಿನಿಂದ ಈತನನ್ನು ನಂಬಿದ್ದರಿಂದ ಅನೇಕ ಬಾರಿ ಎಂ. ಎಲ್. ಎ., ಎಂ. ಎಲ್. ಸಿ. ಯಾಗಿ ಆಯ್ಕೆಯಾದನು. ಹಾಗಾಗಿ ರುದ್ರಮ್ಮನವರು ಅತ್ಯಂತ ಭಾವುಕರಾಗಿಯೇ ನುಡಿಯುತ್ತಾರೆ. ''ನುಂಕಪ್ಪ ದೊಡ್ಡವನು ಸ್ವಾಮಿ, ಆತನ ಪವಾಡ ಇಪ್ಟು ಶ್ರೀಮಂತಿಕೆ ಕಂಡೀವಿ'' ಎನ್ನುತ್ತಾರೆ. ಇದರ ಹಿಂದೆ 'ಪವಾಡ'ದ ಬಗೆಗಿನ ನಂಬಿಕೆಯನ್ನು ನೋಡಬಹುದುದಾಗಿದೆ.

- **ಹರಳಯ್ಯನವರ ಪವಾಡ :** ಮೊಳಕಾಲ್ಮೂರು ತಿಪ್ಪೆಸ್ವಾಮಿ ಎಂಬಾತನು ತುಂಬಾ ಬಡವನಿದ್ದು ಹರಳಯ್ಯನನ್ನು ಪೂಜಿಸುತ್ತಿದ್ದನು. ಈತ ಕೆಳಗಿನ ಈರ್ಲು ಹತ್ತಿರ ಮೊದಲ ವರ್ಪ ಮಂಡಕ್ಕಿ ಹಂಚಿದ ಮರು ವರ್ಪ ಚಾಕಲೇಟ್ ಹಂಚಿದ, ನಂತರ ಬರುವ ವರ್ಪ ಅನ್ನ ದಾಸೋಗ ಮಾಡಿದ ಹೀಗೆ ಮಾಡಿದ್ದರಿಂದ ಹರಳಯ್ಯನ ಮಹಿಮೆಯಿಂದ ಈತನಿಗೆ ತುಂಬಾ ಸಂಪತ್ತು ಲಭಿಸಿತು ಆದ್ದರಿಂದ ಈತನು ಭಕ್ತಿಪೂರ್ವಕವಾಗಿ ಹರಳಯ್ಯನ ದೇವಸ್ಥಾನದ ಮುಂದೆ ಒಂದು ಮಂಟಪವನ್ನು ಕಟ್ಟಿಸಿದನು ಅಂದಿನಿಂದ ಇಂದಿನವರೆಗೂ ತಿಪ್ಪೇಸ್ವಾಮಿಯವರು ಪರಮ ಭಕ್ತರಾಗಿದ್ದಾರೆ.

- ಮೊಳಕಲ್ಮೂರಿನ ರೇವಣ ಸಿದ್ದಪ್ಪ ಎಂಬಾತನು ಸರ್ಕಾರಿ ನೌಕರಿಯಲ್ಲಿದ್ದು ತುಂಬಾ ದಪ್ಪವಾಗಿದ್ದು ಓಡಾಡಲು ಬಹುತೊಂದರೆಯಾಗುತ್ತಿತ್ತು. ಸಾಕಪ್ಪು ಚಿಕಿತ್ಸೆ ಪಡೆದರೂ ಸಹ ಈತನ ಆರೋಗ್ಯ ಸುಧಾರಿಸಿರಲಿಲ್ಲ ಪೂಜಾರಿಗಳ ಸಲಹೆಯಂತೆ ಭೈರವನನ್ನು ಪೂಜಿಸತೊಡಗಿದನು. ಪ್ರತೀವಾರ ಭೈರವನ ಕ್ಷೇತ್ರಕ್ಕೆ ನಡೆದುಕೊಂಡೇ ಬರಲು ಪ್ರಯತ್ನಿಸಿದ ಹೀಗೆ ಐದು ವಾರಗಳು ಬಂದು ಹೋದರು. ಐದನೆಯ ವಾರದ ಕೊನೆಯ ಹೊತ್ತಿಗೆ ಸಂಪೂರ್ಣವಾಗಿ ಗುಣಮುಖವಾಗಿ ಈ ಕ್ಷೇತ್ರಕ್ಕೆ ಧಾರಾಳವಾಗಿ ಮೆಟ್ಟಿಲನ್ನು ಏರುತ್ತಾ ಬಂದು ಆರೋಗ್ಯ ಪೂರ್ಣ ವ್ಯಕ್ತಿಯಾದ ಇದರ ಜ್ಞಾಪಕಾರ್ಥಕವಾಗಿ ಭೈರವ ಸ್ವಾಮಿಯ ಕ್ಷೇತ್ರದ ಉದ್ದಕ್ಕೂ ನೀರಿನ ವ್ಯವಸ್ಥೆ ಮಾಡಿದ್ದಾನೆ.

- ಮಲ್ಲಿಕಾರ್ಜುನನ ದೇವಾಲಯದ ಮುಂದೆ ಒಂದು ದೀಪಸ್ತಂಭವಿದೆ ಇದು ಪ್ರತಿವರ್ಷವೂ ಸಹ ಮೂರು ಇಂಚಿನಷ್ಟು ಭೂಮಿಗೆ ಇಳಿದು ಹೋಗುತ್ತದೆಯಂತೆ. ಸುಂಕೇಭೈರವನ ಪೂಜಾರಿಗಳ ಮನೆತನದ ಮಲ್ಲಣ್ಣ ನವರ ಪ್ರಕಾರ ಸುಮಾರು ೧೦ ಅಡಿಗಳಷ್ಟಿರುವ ಈ ಕಂಬವು ಈಗ ಕೇವಲ ಮೂರು ಅಡಿಗಳಷ್ಟು ಮಾತ್ರ ಎತ್ತರವಿದೆ ಇದೊಂದು ನ್ಯಾಯ, ನೀತಿ, ಧರ್ಮ ಪ್ರತೀತವೆಂದೂ ಕಾಲ ಕಳೆದಂತೆ ನ್ಯಾಯ, ನೀತಿ, ಧರ್ಮಗಳು ನಾಶವಾಗುತ್ತವೆ ಇದರ ಸಾಂಕೇತಿಕವಾಗಿ ಈ ಕಂಬವು ಭೂಮಿಗೆ ಇಳಿದು ಹೋಗುತ್ತದೆಯೆಂದು ಇಲ್ಲಿಯ ಜನಪದರ ನಂಬಿಕೆಯಾಗಿದೆ.

- ಈ ಹಿಂದೆ ಭೈರಾಪುರದ ವೀರಶೈವ ಜನಾಂಗದ ಅಕ್ಕ-ತಮ್ಮಂದಿರಿಬ್ಬರೂ ಎತ್ತಿನ ವ್ಯಾಪಾರ ಮಾಡುತ್ತಿದ್ದರೂ ಹೀಗಿರುವಾಗ ಕಟ್ಟಿಹಾಕಿದ ೧೨ ಎತ್ತುಗಳೂ ಸಹ ಮೂರ್ಛೆ ಹೋಗಿದ್ದವಂತೆ ಶಾಸ್ತ್ರ ಕೇಳಿಸಿದ ನಂತರ ಜೋಯಿಸರ ಪ್ರಕಾರ ಭೈರವನ ದರ್ಶನ ಮಾಡಿಕೊಂಡು ಬಂದು ತೀರ್ಥ ಚೆಲ್ಲಿದ ನಂತರ ಮೂರ್ಛೆಹೋಗಿದ್ದ ಎತ್ತುಗಳು ಮೇಲಕ್ಕೆದ್ದವಂತೆ.

- **ಉರಿಗದ್ದುಗೆಯ ಮಹತ್ವ :** ಉರಿಗದ್ದುಗೆಯು ಗೋರಕ್ಷಕನಾಥ ಮಠದಲ್ಲಿದೆ ಕರಿಯ ಕಂಬಳಿಯ ಮೇಲೆ ಖಡ್ಗ, ಕತ್ತಿಗಳು, ತುರಾಯಿ, ಗುದ್ದುಬಾಕು ಜೋಗಿಯ ಬೆತ್ತ, ಇವುಗಳನ್ನು ಕಾಣಬಹುದು. ಹಿಂದೆ ಜೋಳದ ಕಾಳು ಅದರ ಮೇಲೆ ಹಾಕಿದರೆ ಸುಟ್ಟು ಹರಳಾಗುತ್ತಿತ್ತಂತೆ. ಈ ಕ್ಷೇತ್ರದ ಸ್ವಾಮಿಯು (ಪರದೇಶಿ) ದಸರಾ ಹಬ್ಬದಲ್ಲಿ ಒಂಭತ್ತು ದಿನಗಳ ಪರ್ಯಂತ ಹಾಲು ಹಣ್ಣು, ಸೇವಿಸಿ ತಪ್ಪಸ್ಸು ಮಾಡುವ ಪದ್ಧತಿಯಿದೆ ಇದು ಸ್ವಾಮಿಯ ಶುಚಿತ್ವವನ್ನು ಸೂಚಿಸುತ್ತದೆ. ಸುತ್ತ ಮೂವತ್ಮೂರು ಹಳ್ಳಿಗರಿಗೂ ಈ ಉರಿಗದ್ದಿಗೆಯ ಪ್ರಭಾವ ತುಂಬಾ ಮಹತ್ವವಾದದ್ದು ಯಾವುದಾದರೊಂದು ನ್ಯಾಯ ತೀರ್ಮಾನ ಮಾಡುವಾಗ ಈ ಉರಿಗದ್ದುಗೆಯನ್ನು ಬಡಿದು ಪ್ರಮಾಣ ಮಾಡಿದರೆ ಜನಗಳು ಪ್ರಾಣ ಬಿಡುತ್ತಿದ್ದರು. ಅನ್ಯಾಯ ಕಂಡು ಬಂದರೆ ಮರುದಿನವೇ ಅಂತವರಿಗೆ ಯಾವುದಾದರೂ ಗತಿ ಕಂಡು ಬರುತ್ತಿತ್ತು ಕಳ್ಳತನ ಮಾಡಿದವನು ಇದರ ಹತ್ತಿರ ಬಂದರೆ ನಿಜಾಂಶವನ್ನು ನುಡಿಯುತ್ತಾನೆ.)

- ಮೊಳಕಾಲ್ಮೂರ ತಾಲ್ಲೂಕಿನ ಯರ್ರಯ್ಯನಹಳ್ಳಿ ಎಂಬ ಗ್ರಾಮದಲ್ಲಿ ಶಾಲಾ ಶಿಕ್ಷಕ ಡಿ.ಬಿ. ಅಜ್ಜಮುನಿಯವರಿಂದ ರಚನೆಯಾದ 'ಸುಂಕೇಮಲೆ ಸಿದ್ದೇಶ್ವರ' ಎಂದು ಬಯಲು ನಾಟಕ ರೂಪದಲ್ಲಿ 'ನಾಟಕ' ವನ್ನು ಆಟವಾಡಿಸುತ್ತಾ ಬಂದಿದ್ದಾರೆ. ಒಂದು ಬಾರಿ ನಾಟಕ ನಡೆಯಿತ್ತಿರುವ ಸಂದರ್ಭದಲ್ಲಿ ನೋಡುತ್ತಿರುವ ಪ್ರೇಕ್ಷಕರು ಕಲಾವಿದರನ್ನು ಜರೆಯುತ್ತಾ ಗಾಡಿಯೂಡಿಕೊಂಡು ಪಕ್ಕದ ಹಳ್ಳಿಗೆ ಹೋಗುವಾಗ ಗಾಡಿ ಎಳೆಯುವ ಎತ್ತುಗಳಿಗೂ ಹಾಗೂ ಗಾಡಿಯಲ್ಲಿರುವ ಮನುಷ್ಯರಿಗೆಲ್ಲಾ ಕಣ್ಣುಗಳು ಕಾಣದಾದವಂತೆ ಆಗ ಭೈರವನನ್ನು ನೆನೆದು ಮರಳಿ ಬಂದು ರಂಗ ಮಂದಿರಕ್ಕೆ ಬಂದು ಕ್ಷಮೆ ಕೇಳಿಕೊಂಡರಂತೆ.

## ೪.೨.೫. : ನುಂಕೇ ಮಲೆ ಭೈರವನ ಉಡುಗೆ – ತೊಡುಗೆಗಳು

ಶ್ರೀ ನುಂಕೇಮಲೆ ಭೈರವನು ಮಾನವಾಕೃತಿಯಾಗಿ ಪಿತ್ತಾಳಿಯಪೀಠದ ಮೇಲೆ ನಿಂತಿರುವನು ಈತನ ಮೂರ್ತಿಯ ಚತುರ್ಭುಜಗಳಲ್ಲಿ ಬಲಗೈಗಳಲ್ಲಿ ಡಮರುಗ, ಖಡ್ಗಗಳೂ, ಎಡಗೈಯ್ಯಲ್ಲಿ ತ್ರಿಶೂಲ ಶಕ್ಯಸಿದಲಿಗಳನ್ನು ಉದರದ ನಾಗಭಂಧನದಿಂದಲೂ ಹೂಡಿರುವುದು. ಈತನ ದೇವಾಲಯದೊಳಗೆ ಬಣ್ಣದ ಕುದುರೆಯೂ ಎಡಗಡೆ ನಾಯಿಯು ಅಡರಿದೆ ಜ್ಞಾನನೇತ್ರವನ್ನು ಸೂಚಿಸುವ ಹರಿಗಣ್ಣು ರಂಜಿಸುತ್ತದೆ. ಹಾಗೆಯೇ ಹಾವಿನ ಹಾಸಿಗೆಯೂ ಚೇಳಿನ ಗದ್ದುಗೆಯವನೆಂದೂ ಹುಲದೊಗಲನ್ನು ಹೊದ್ದವನೆಂದು ಹೇಳಲಾಗಿದೆ. ಎಂದಿಗೂ ಬಿಳಿಯ ರೇಷ್ಮೆಯ ಪಂಚೆಯನ್ನು ಅಂದವಾಗಿ ಉಡಿಸಿರುತ್ತಾರೆ. ಅಕ್ಕ ಪಕ್ಕದಲ್ಲಿ ನುಂಕವ್ವ, ಮಲಿಯವ್ವನ ವಿಗ್ರಹಗಳಿವೆ. ಸೊಂಟದಲ್ಲಿ ಕತ್ತಿಯನ್ನು ಧರಿಸಿದ್ದಾನೆ, ಜೋಗಿಯ ದೇವಸ್ಥಾನದಲ್ಲಿ ಹಲವಾರು ತ್ರಿಶೂಲಗಳು, ಅಕ್ಷಯ ಪಾತ್ರಗಳು, ಯೋಗಿಗಳು ಧರಿಸುವ ಕಾವಿಬಟ್ಟೆಯೂ, ಜೋಗಿಯು ಬಾರಿಸುವ ಕಿನ್ನುರಿ ಸಾಕಷ್ಟು ರುದ್ರಾಕ್ಷಿಗಳಿವೆ. ಮೂರ್ತಿಗಳ ಹಿಂದುಗಡೆ 'ಉರಿಗದ್ದುಗೆ' ಇದೆ, ಇದರ ಮೇಲೆ ಈ ಗದ್ದುಗೆಯ ಮೇಲೆ ಯೋಗಿಯ ಕಮಂಡಲರಾಗಿಯ ಚೆಂಬು ಹಲವಾರು ರುದ್ರಾಕ್ಷಿಗಳು, ಸಾಕಷ್ಟು ಕತ್ತಿಗಳು ಗುದ್ದುಬಾಕು, ಬೆತ್ತದ ಕೋಲುಗಳು ಇವುಗಳನ್ನಿಟ್ಟು ಭಯಂಕರವಾಗಿ ಕಾಣುವಂತೆ ಮಾಡಿದ್ದಾರೆ. ದೊಡ್ಡ, ದೊಡ್ಡ ಗಂಟೆಗಳು ಆರತಿ ಎತ್ತುವ ರಾಗಿಯ ತಟ್ಟೆ, ಬೆಳ್ಳಿಯ ತಟ್ಟೆಗಳು ತೀರ್ಥ ಕೊಡುವ ಬೆಳ್ಳಿಯ ಚಮಚ, ಭಟ್ಟಲು, ಲೋಟಗಳಿವೆ. ಹಾಗೂ ಮೊನ್ನೆ ತಾನೇ ಮಾಡಿಸಿದ ೫೦-೬೦ ಕೆ.ಜಿ.ತೂಕದ ಕಂಚಿನ ಎರಡು ದೀಪದ ಕಂಬಗಳು ಅಂದವಾಗಿ ಕಲಾತ್ಮಕವಾದ ರೂಪವನ್ನು ಪಡೆದಿವೆ. ಪೂಜಾರ ಗುಡ್ಡದ ಸಿದ್ದಣ್ಣ ಹೇಳುವಂತೆ 'ಕುಮುತಿ'ಯ ಬಳಿ ಸಿದ್ಧಲಿಂಗೇಶ್ವರದ ದೇವಸ್ಥಾನದ ಮುಂದೆ ಬಂಡೆಯ ಮೇಲೆ ಕೆತ್ತಲ್ಪಟ್ಟಿರುವ ನುಂಕಪ್ಪನ ಪಾದಗಳ ಸುತ್ತ ಸರ್ಪ ಸುತ್ತಿರುವುದು ಕಂಡುಬರುತ್ತದೆ. ಇದರಿಂದ ನುಂಕಪ್ಪನ ಸರ್ಪದಾರಿಯೂ ಹೌದು.

ಹಾಗೂ ಈತನಿಗೆ ಬಲ್ಲಾಳರಾಯನು ಉಡುಗೊರೆಯಾಗಿ ಕೊಟ್ಟಿದ್ದ ಎಂದು ಹೇಳುವ ಟಗರು, ಮತ್ತು ಕುದುರೆಯನ್ನೇರಿರುವ ವಿಗ್ರಹ ಇವುಗಳನ್ನು ಗಮನಿಸಬಹುದು. ಕರ್ಪೂರದಮ್ಮನ ಪಾದಗಳು ಹಾಗೂ ಈ ದೇವಿಯ ಗುಡಿಯೊಳಗೆ ಒನಕೆಯನ್ನೂ, ಹರಳಯ್ಯನ ಮೇಲಿನ ಈರ್ಲಿನಲ್ಲಿ ಪಾದರಕ್ಷೆಗಳನ್ನು ತಯಾರಿಸುವ ಸಲಕರಣೆಗಳೂ ಪಿಡಿಯಾಡುವಾಗ ಉಪಯೋಗಿಸುವ ಕೊಂಡಿಯ ಚಿತ್ರಗಳನ್ನು ಸಹ ಗಮನಿಸಬಹುದು. ನುಂಕೆ ಮಲೆ ಭೈರವನಿಗೆ ಜಾತ್ರೆಗಳ ಸಂದರ್ಭದಲ್ಲಿ ಅನೇಕ ಬಂಗಾರದ ಹಾಗೂ ಬೆಳ್ಳಿಯ ಸಾಮಾನುಗಳನ್ನು ಸಹ ಉಡಿಸಲಾಗುವುದು. ಬೆಳ್ಳಿಯ ಛತ್ರಿ, ಕಳಸ, ಕಿರೀಟ, ಕೋರೆ ಮೀಸೆ, ಬೆಳ್ಳಿಯ ಕಣ್ಣುಗಳು, ಗೆಜ್ಜೆ ಉಡುದಾರ, ಲಿಂಗದ ಕಾಯಿ, ತ್ರಿಶೂಲ, ಮುಖವಾಡ ಮುಂತಾದವುಗಳನ್ನು ಕಾಣಬಹುದು.

ಹಾಗೆಯೇ ನುಂಕವ್ವ ಮತ್ತು ಮಲಿಯವ್ವರು ಸೀರೆಯುನ್ನುಟ್ಟು ಇಲ್ಲಿಯ ಸಾಂಸ್ಕೃತಿಕ ಬಿಂಬವಾಗಿ ಕಾಣುತ್ತಾರೆ. ಇನ್ನು ಈ ಮೇಲೆ ಹೇಳಿದ ಎಲ್ಲಾ ಉಡುಪುಗಳ ಮೇಲೆಯೂ ಆಧುನಿಕತೆಯ ಪ್ರಭಾವ ದಟ್ಟವಾಗಿ ಕಾಣುತ್ತದೆ. ಹರಕೆ ಹೊರುವವರು ಅವರ ಆರ್ಥಿಕ ಸ್ಥಿತಿಗತಿಗನುಗುಣವಾಗಿ ಬೆಳ್ಳಿಯ ತ್ರಿಶೂಲ, ತಾಮ್ರದ ತ್ರಿಶೂಲ, ಬಂಗಾರದ ಉಡುದಾರ ಮುಂತಾದವುಗಳನ್ನು ಅರ್ಪಿಸುವುದನ್ನು ಕಾಣಬಹುದು. ಈ ಹಿಂದೆ ಕಾಟನ್ ಪಂಚೆ ಸೀರೆಯನ್ನು ಉಡಿಸುತ್ತಿದ್ದವರು ಇಂದು ರೇಷ್ಮೆ ಸೀರೆ, ಮತ್ತು ರೇಷ್ಮೆ ಪಂಚೆಯನ್ನು ತೊಡಿಸುವುದನ್ನು ನೋಡಿದರೆ ದೇವರೂ ಸಹ ಆಧುನಿಕತೆಯೊಂದಿಗೆ ಮುಖಾಮುಖಿಯಾಗುತ್ತವೇನೋ ಎನ್ನುವ ಭ್ರಮೆಯನ್ನು ಹುಟ್ಟಿಸುತ್ತದೆ.

ಹೀಗೆ ದೇವರಿಗೆ ತೊಡಿಸುವ ಉಡುಪುಗಳೂ ಸಹ ಒಂದು ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಹಾಗೆಯೇ ತನ್ನದೇ ಆದ ಪರಂಪರೆಯನ್ನು ಬಿಚ್ಚಿಡುತ್ತವೆ. ಈ ಕಾರಣದಿಂದಾಗಿ ದೈವ ಸಂಬಂಧಿ ಉಡುಪುಗಳೂ ಸಹ ಅಧ್ಯಯನಕಾರನಿಗೆ ಹೊಸ ಹೊಳಹುಗಳ ಸುಳಿವನ್ನು ನೀಡುತ್ತವೆ.

**ಟಿಪ್ಪಣಿಗಳು :**

೧. ಗ್ರಾಮದೇವತೆಗಳು - ಡಾ॥ಸಿದ್ಧಲಿಂಗಯ್ಯ (ಪು. ೭೧)

೨. ನಮ್ಮ ಜನಪದ ನಂಬಿಕೆಗಳು - ಜಿ.ವಿ.ದಾಸೇಗೌಡ (ಪು. ೩-೧೦)

೩. ನಮ್ಮ ಸುತ್ತಿನ ನಂಬಿಕೆಗಳು - ಡಿ.ಕೆ.ರಾಜೇಂದ್ರ, (೩-೧೦) (ಸಂಪಾದಕ ಕೃತಿ)

೪. ಜನಪದ ನಂಬಿಕೆಗಳು - ಡಾ॥ ಮಂಜುನಾಥ ಬೇವಿನ ಕಟ್ಟಿ.

೫. ಮೂಢನಂಬಿಕೆಗಳು - ಡಾ॥ ಆರ್. ಇಂದಿರಾ (ಪು. ೭)

೬. ಆಚರಣೆಗಳು - ಎಸ್. ಎಸ್. ಹಿರೇಮಠ್ (೧-೯೪)

೭. ಭಾರತೀಯ ಹಬ್ಬಗಳ ವೈಶಿಷ್ಟ್ಯ - ವಿ. ಎಸ್. ಭಟ್

೮. ಕರ್ನಾಟಕ ಜಾತ್ರೆಗಳು - ಹಂಪಾ ನಾಗರಾಜಯ್ಯ (೯-೧೦)

೯. ಕನ್ನಡ ಜಾನಪದ ವಿಶ್ವಕೋಶ - ಡಾ॥ ಚಂದ್ರಶೇಖರ ಕಂಬಾರ್

೧೦. ಮೊಳಕಾಲ್ಮೂರು ನುಂಕೇಮಲೆಯ ಪರಮಾರ್ಥ - ಎಂ.ರಂಗಪ್ಪ ಎಫ್.ಟಿ. ಎಸ್.

## ೫. ನುಂಕೇಮಲೆ ಭೈರವ ಮತ್ತು ಇತರ ದೈವಗಳ ಸಂಬಂಧಗಳು

ಅತ್ಯಂತ ಪ್ರಾಚೀನ ಕಾಲದಿಂದಲೂ ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಧರ್ಮಗಳಲ್ಲಿಯೂ ದೈವತ್ವದ ಬಗೆಗೆ ನಂಬಿಕೆಯಿದೆ. ಋಗ್ವೇದದಲ್ಲಿಯೂ ಸಹ ಇಂದ್ರ, ಮಿತ್ರ, ವರುಣ, ಅಗ್ನಿ ಮುಂತಾದ ದೇವರುಗಳನ್ನು ಹೆಸರಿಸಲಾಗಿದೆ. ಪ್ರಾಚೀನ ಸ್ಮೃತಿಗಳು ಉಪನಿಷತ್ತುಗಳು ಹಾಗೂ ಮಂತ್ರಶಾಸ್ತ್ರ ಮತ್ತು ತಂತ್ರ ಶಾಸ್ತ್ರಗಳು ದೈವದ ಇರುವಿಕೆ ಸ್ವಭಾವವನ್ನು ಚರ್ಚಿಸಿವೆ. ಎಲ್ಲಾ ಭಾರತೀಯ ದೇವತೆಗಳು ಕಶ್ಯಪ, ಪ್ರಜಾಪತಿ ಹಾಗೂ ತಿದಿಯ ಮಕ್ಕಳು ದೇವತೆಗಳು ಮೂವತ್ಮೂರು ಕೋಟಿ ಇವೆ ಎಂದು ಹೇಳಲಾಗಿದೆ. ಆದಿತ್ಯರು, ವಸುಗಳು, ರುದ್ರರು, ಗಾಂಧರ್ವರು, ಭೂತಗಳು, ರಾಕ್ಷಸರು, ಸಿದ್ಧರು, ಇನ್ನು ಮುಂತಾದ ದೇವರುಗಳ ಹೆಸರುಗಳನ್ನು ಹೆಸರಿಸಲಾಗಿದೆ. ಇವರೆಲ್ಲರಿಗೂ ಇಂದ್ರನೇ ಮುಖ್ಯನಾದವನು.

ದೇವ ಎಂಬ ಪದದ ಅರ್ಥ 'ಹೊಳಪು' ವಿನೋದ, ದೇವತೆಗಳು ಹೊಳೆಯುವವರು ಮತ್ತು ವಿನೋದಗಳನ್ನು ಮಾಡುವವರು ಹೀಗೆ ಅವರಿಗೆ ಈ ಹೆಸರು ಹೊಂದಿಕೊಳ್ಳುತ್ತದೆ. ಮೊದಲು ಕಾಡಿನಲ್ಲಿ ವಾಸಿಸುವ ಮಾನವ ದೇವರನ್ನು ಅಮೂರ್ತವಾಗಿ ಪೂಜಿಸುತ್ತಿದ್ದ ಗ್ರಾಮ ಮಾನವನಾದಾಗ ತನ್ನ ಪುಜೆಯನ್ನು ಮೂರ್ತಸ್ಥಿತಿಗೆ ತಂದನು ಅವನು ಪೂಜಾ ವಸ್ತುಗಳು ಒರಟಾದ ಕಲ್ಲು, ಕಟ್ಟಿಗೆ, ರೂಪದಲ್ಲಿ ಅನಂತರ ಮೂರ್ತಿ ರೂಪ ಮಾಡಿ ಮಾನವಾಕೃತಿಯ ಗೊಂಬೆ ಮಾಡಿ ಪೂಜಿಸತೊಡಗಿದನು. ವ್ಯವಸಾಯ ವೃತ್ತಿಯಿಂದ ಕಾಡು ಜೀವನ ಹೋಗಿ ಗ್ರಾಮ ಜೀವನ ಆರಂಭವಾದ ಮೇಲೆ ಗ್ರಾಮಗಳು ಸೇರಿ ಪಟ್ಟಣಗಳಾದ ಮೇಲೆ ರಾಜರು ಬಂದು ಕೋಟೆ ಕೊತ್ತಲುಗಳನ್ನು ಕಟ್ಟಿಸಿದರು ಅಕ್ಷರ ಜ್ಞಾನ ಹೆಚ್ಚಾಯಿತು. ಶಾಸ್ತ್ರ ಪುರಾಣಗಳು ಹುಟ್ಟಿಕೊಂಡು ಕಾಡು ಜೀವನದ ದೈವದ ಶಕ್ತಿಗಳಿಗೆ ಪುರಾಣದ ಕಥೆಕಟ್ಟಿ ಸಂಸ್ಕೃತೀಕರಣಗೊಂಡು ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಸೃಷ್ಟಿಸಿದರು. ಅದರಲ್ಲೂ ಶಿವಾರಂಭವೆ ಜಾಸ್ತಿಯಾಯ್ತು ಕ್ರಮೇಣ ಹನುಮನ ಬಾಲದಂತೆ ದೇವರುಗಳು ಬೆಳೆದವು. ಇವುಗಳಿಗೆ ಒಂದಕ್ಕೊಂದು ಸಂಬಂಧವನ್ನು ಕಟ್ಟಿಸಲಾಯಿತು. ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ದೇವರುಗಳಿಗೇನು ಕೊರತೆಯಿಲ್ಲ. ಓಣಿಗೊಂದು ದೇವರಿರುವುದನ್ನು ಕಾಣಬಹುದು. ಹಾಗೆಯೇ ನುಂಕೇ ಮಲೆ ಕ್ಷೇತ್ರದಲ್ಲಿಯೂ ಸಹ ಕದಂಬರ ರಾಜರು 'ಲುಂಕೇ' ಎಂಬ ಕೋಟೆಯನ್ನು ಕಟ್ಟಿ ಕೊಂಡು ತಮಗೆ ರಕ್ಷಕನಾಗಿ ಲುಂಕಪ್ಪನನ್ನು ಸ್ಥಾಪಿಸಿ ಕೊಂಡಿದ್ದರು ಎಂಬುದನ್ನು ಇಲ್ಲಿ ದೊರೆಯುವ ಶಾಸನಗಳ ಮೂಲಕ ತಿಳಿಯಬಹುದು. ಮೌಖಿಕ ಚರಿತ್ರೆಯ ಹಿನ್ನೆಲೆಯಾಗಿ ನೋಡಿದಾಗ ನಮ್ಮ ಜನಪದರು ಈ ದೇವರಿಗೆ ಪುರಾಣದ ಕಥೆ ಕಟ್ಟಿ ಸಂಬಂಧ ಪಟ್ಟ ಕೆಲವು ದೇವರುಗಳನ್ನು ಸೃಷ್ಟಿಸಿ ಒಂದಕ್ಕೊಂದನ್ನು ಸಂಬಂಧ ಕಲ್ಪಿಸಿರಬಹುದು.

**ಮಲ್ಲಿಕಾರ್ಜುನ :**

ಈ ಕ್ಷೇತ್ರದಲ್ಲಿ ಮಲ್ಲಿಕಾರ್ಜುನ ಅಥವಾ ಶಿವನು ನುಂಕೇ ಮಲೆ ಭೈರವನ ತಂದೆಯಾಗಿ ಕಂಡುಬರುತ್ತಾನೆ. ಕೈಲಾಸದಲ್ಲಿ ಗಾಂದರ್ವ ಕನ್ಯೆಯರು ಪರಮೇಶ್ವರನ ಸಭಾಂಗಣದಲ್ಲಿ ಬಹು ಕೆಟ್ಟದಾಗಿ ವರ್ತಿಸಿದ್ದರಿಂದ ನೀವು ಕೆಲವು ಕಾಲ ಭೂಲೋಕದಲ್ಲಿ ರಾಕ್ಷಸರಾಗಿ ಹುಟ್ಟಿರಿ ಎಂದು ಶಾಪ ಕೊಟ್ಟನು ಗಾಂಧರ್ವ ಕನ್ಯೆಯರು ಶಾಪ ವಿಮೋಚನೆ ಮಾರ್ಗ ಕೇಳಲು ತನ್ನ ಮಕ್ಕಳಾದ ಕರ್ಪೂರದಮ್ಮ, ಭೈರವನು ಬಂದು ನಿಮಗೆ ಮುಕ್ತಿ ಕಾಣಿಸುತ್ತಾರೆಂದು ಹೇಳಿದನು. ಇತ್ತ ಪರಮೇಶ್ವರನು ಕರ್ಪೂರದಮ್ಮನನ್ನು, ಕಾಲಭೈರವನನ್ನೂ ಸೃಷ್ಠಿಮಾಡಿ ನೀವು ಭೂಲೋಕಕ್ಕೆ ತೆರಳಿ ದುಷ್ಟರನ್ನು ಶಿಕ್ಷಿಸುತ್ತಾ ಶಿಷ್ಟರನ್ನು ಸಂರಕ್ಷಿ ಕೆಲವು ಕಾಲ ಪವಾಡಗಳನ್ನು ತೋರಿಸಬೇಕು ಕೊನೆಗೆ ನಿಮ್ಮ ಕೆಲಸ ಕಾರ್ಯಗಳು ಅಲ್ಲಿಗೆ ಮುಗಿಸಿಕೊಂಡು ನೀವು ಎಲ್ಲಿ ನೆಲೆಗೊಳ್ಳುವಿರೋ ನಾನು ಬಂದು ನಿಮ್ಮನ್ನು ಜೆಟ್ಟಿಯಾಗುತ್ತೇನೆಂದು ಹೇಳಿಕಳಿಸಿದನು.

ಅದೇರೀತಿ ಕೊನೆಗೆ ನುಂಕೇಮಲೆಯ ಬೆಟ್ಟದಲ್ಲಿ ಪರಮೇಶ್ವರನು ಬಂದು ಸ್ಥಾಪನೆಯಾದ ಅದರ ಪಕ್ಕದಲ್ಲಿ ಮಲ್ಲಾಪುರ ಪಟ್ಟಣವೆಂದು ಕರೆಯುವ ಹಾಳು ಬಿದ್ದ ಮನೆಯ ಬುನಾದಿ ತರಹ ಕಾಣುವ ಅವಶೈಷಗಳಿವೆ. ನುಂಕಪ್ಪನ ತೇರು ಹರಿಯುವಾಗ ಮೊದಲು ತನ್ನ ತಂದೆಯ ಕಡೆಗೆ ಬಂದು ಮರಳಿ ಹೋಗುವ ಸಂಪ್ರದಾಯವುಂಟು. ನಾಯಕನಹಟ್ಟಿ, ಕೊಟ್ಟೂರು, ತೇರುಗಳು ಪಾದಗಟ್ಟೆಯವರೆಗೆ ಹರಿಯುತ್ತದೆ. ಆದರೆ ಇದು ಇವರಡಕ್ಕಿನ್ನೂ ಭಿನ್ನ. ಜಾತ್ರೆಯಲ್ಲಾಗಲೀ ಅಥವಾ ಪ್ರಮುಖ ಹಬ್ಬಗಳಲ್ಲಾಗಲೀ ಮೊದಲ ಪೂಜೆ ಸಲ್ಲಿಸಿ ತನ್ನ ತಂದೆಯ ಅಪ್ಪಣೆಯನ್ನು ಪಡೆದುಕೊಂಡೇ ಭೈರವ ಸ್ವಾಮಿಯು ಮುಂದಿನ ಕಾರ್ಯಕ್ರಮಗಳಿಗೆ ಪ್ರವೇಶಿಸುವನು.

ಮೊಳಕಾಲ್ಮೂರಿನವರು ಸಣ್ಣ ಜಾತ್ರೆ ಮಾಡುವ ಸಂದರ್ಭದಲ್ಲಿ ನಿಮ್ಮ ಮಗನನ್ನು ನಮ್ಮೂರಿಗೆ ಕಳಿಸಿಕೊಡಿ ಎಂದು ಬೇಡಿ ಆತನು ಸಮ್ಮತಿಸಿದರೆ ಮಾತ್ರ ನುಂಕಪ್ಪನನ್ನು ಕರೆದುಕೊಂಡು ಹೋಗುತ್ತಾರೆ. ಇಲ್ಲವಾದರೆ ಅವರು ಹಾಕಿಕೊಂಡ ಕಾರ್ಯಕ್ರಮಗಳನ್ನೆಲ್ಲಾ ರದ್ದು ಮಾಡುವರು.

**ಕರ್ಪೂರದಮ್ಮ :**

ಶ್ರೀ ನುಂಕೇಮಲೆಯ ಕ್ಷೇತ್ರದಲ್ಲಿ ಕ್ಷೇತ್ರದ ಪೂರ್ವದಿಕ್ಕಿಗೆ ಕರ್ಪೂರದಮ್ಮನ ದೇವಾಲಯವಿದೆ. ಈ ದೇವಿಗೆ ತುಪ್ಪದಮ್ಮನೆಂದೂ ಸಹ ಕರೆಯುತ್ತಾರೆ. ಹಾಗೂ ಹರಳಯ್ಯನ ಕೆಳಗಿನ ಈರ್ಲು ಎಂದು ಕರೆಯುವ ಸ್ಥಳವಲ್ಲಿ ಕರ್ಪೂರಮ್ಮನ ಪಾದಗಳಿವೆ. ಜಾತ್ರೆಯಲ್ಲಿ ಹರಕೆ ಹೊತ್ತು ಬಂದ ಭಕ್ತಾದಿಗಳು ಬಾಯಿ ಬೀಗಗಳನ್ನು ಈ ಪಾದ ಸನ್ನಿಧಿಯಲ್ಲಿಯೇ ಬಿಚ್ಚಬೇಕೆಂಬ ನಿಯಮವಿದೆ. ಆದ್ದರಿಂದ ಬಾಯಿಬೀಗ, ಬೇವಿನ ಸೀರೆ ಕರ್ಪೂರದಮ್ಮನವು ಎಂದು ಹೇಳಲಾಗುತ್ತಿದೆ. ಸಿಡಿಯಾಡುವುದೂ ಸಹ ತುಪ್ಪದಮ್ಮನಿಗಾಗಿ ಈ ದೇವಿಯದ್ದು ಎಂದು ಹೇಳುತ್ತಾರೆ. ಸಿಡಿಯಾಡುವಾತನು ತುಪ್ಪದಮ್ಮನ ಗುಡಿಯ ಕಡೆಗೆ ವೇಗವಾಗಿ ಓಡುವಾಗ ಪಟ್ಟದ ಸ್ವಾಮಿಯು ಬಂದು ಅವನನ್ನು ಅರ್ಧದಾರಿಯಲ್ಲೇ ಹಿಡಿದು ಹಿಂದಿರುಗಿಸಿಕೊಂಡು ಬಂದು ಸಿಡಿಯ ಕಂಬಕ್ಕೆ ಬಿಗಿಯುತ್ತಾನೆ. ಇದನ್ನು ಗಮನಿಸಿದಾಗ ಬ್ರಾಹ್ಮಿಣಿಯು ಮೋಸಮಾಡಿದ ತನ್ನ ಗಂಡನನ್ನು ಹಿಡಿದು ತಂದು ಬಲಿತೆಗೆದುಕೊಳ್ಳುವ ಸಂಕೇತವಾಗಿದೆ. (ಸಿಡಿಯು ಈ ದೇವಿಯದ್ದು ಎಂದು ಹೇಳಿದರೂ ಸಹ ತಮ್ಮನ ಗುಡಿಯ ಮುಂದೆ ಸಿಡಿಸೇವೆಯನ್ನು ಮಾಡಲಾಗುವುದು. ಈಕೆಯ ದೇವಸ್ಥಾನದಲ್ಲಿ ಹೂ ಕೇಳುವ ಸಂಪ್ರದಾಯವಿದೆ ದೇವಿಯ ಬಲಭಾಗದಿಂದ ಹೂ ಕೊಟ್ಟರೆ ತಮ್ಮ ಬೇಡಿಕೆ ಈಡೇರುವುದೆಂದೂ ಎಡಭಾಗದಿಂದ ಹೂ ಕೊಟ್ಟರೆ ಕಾರ್ಯ ಕೈಗೂಡುವುದಿಲ್ಲವೆಂದು ನಂಬುತ್ತಾರೆ. ಹಾಗೂ ಕ್ಷೇತ್ರದ ಪಶ್ಚಿಮದಿಕ್ಕಿಗೆ ಮೂಗು ಬಸಪ್ಪನ ಹತ್ತಿರ ಈ ದೇವಿಯೂ ಕಾಟಣ್ಣನೂ ಸೇರಿ ಪಗಡೆಯಾಟ ಆಡಿದ ಐತಿಹ್ಯವಿದೆ. ಒಂದು ಬಾರಿ ಕಾಟಣ್ಣನಿಗೂ ಹಾಗೂ ಬಲ್ಲಾಳರಾಯನಿಗೂ ಯುದ್ಧನಡೆಯುವಾಗ ಕಾಟಣ್ಣನ ಪರವಹಿಸಿದ ಕರ್ಪೂರದಮ್ಮ ಮಾಯದ ಮಳೆಯನ್ನು ತರಿಸಿ ಬಲ್ಲಾಳರಾಯನ ಹತ್ತಿರವಿರುವ ಬಾರಿ ಮದ್ದು ಗುಂಡುಗಳನ್ನು ನಾಶಪಡಿಸಿ ಕಾಟಣ್ಣನಿಗೆ ಜಯಲಭಿಸುವಂತೆ ಮಾಡಿದಳಂತೆ.

ಒಟ್ಟಿನಲ್ಲಿ ಕರ್ಪೂರದಮ್ಮನು ನುಂಕಪ್ಪನ ಅಕ್ಕನಾಗಿ ಕಂಡು ಬರುತ್ತಾಳೆ ತುಪ್ಪದಮ್ಮ ಎಂದು ಸಹ ಕರೆಯುವುದುಂಟು. ಬಿಜ್ಜಳರಾಜನಿಗೂ ಮತ್ತು ಕಾಟಣ್ಣನಿಗೂ ರಾಜಿ ಮಾಡಿಸಿದಾಗ ತುಪ್ಪದ ಓಕಳಿಯಾಡಿದ ನಂತರ ತುಪ್ಪದಮ್ಮ ಎಂದು ಹೆಸರು ಬಂದಿರುವುದುಂಟು. ರಾಕ್ಷಸರ ಸಂಹಾರಕ್ಕಾಗಿ ಪರಮೇಶ್ವರನು ಭೂಲೋಕಕ್ಕೆ ನುಂಕೇ ಭೈರವನನ್ನೂ ಈತನ ಸಹಾಯಕ್ಕಾಗಿ ಅಕ್ಕ ಕರ್ಪೂರದಮ್ಮನನ್ನೂ ಸೃಷ್ಟಿಸಿ ಕಳಿಸಿರುತ್ತಾನೆ. ಇವರು ಉಜ್ಜಿನಿ, ಮೊಗಾದ್ರಿಮಲೆ, ನಂಜೇರಿ, ಕುಮತಿ, ಸ್ಥಳಗಳನ್ನು ಸಂಚರಿಸುತ್ತಾ ಕೊನೆಗೆ ನುಂಕೇಮಲೆಯ ಬೆಟ್ಟಕ್ಕೆ ಬರುತ್ತಾರೆ

ಕೆಲವೊಂದು ಬಾರಿ ಭೈರವನು ರಾಕ್ಷಸರ ವಿಷದ ಜ್ವಾಲೆಗೆ ಸಿಕ್ಕಿ ಹಾಕಿಕೊಂಡಿರುವ ಸಂದರ್ಭಗಳಲ್ಲಿ ಕರ್ಪೂರದ ತನ್ನ ತಂದೆಯನ್ನು ಸ್ಮರಿಸಿ ತನ್ನ ಸೆರಗಿನಿಂದ ಸ್ಪರ್ಶಿಸಿ ಬದುಕಿಸುತ್ತಾಳೆ. ಒಂದು ಸಾರಿ ನುಂಕಪ್ಪನು ರಕ್ತಬೀಜಾಸುರನಾದ ಅಂಗ್ಸನೊಡನೆ ಕಾದಾಡುವಾಗ ಕಾಟಣ್ಣನ ೧೦೧ ನಾಯಿಗಳ ಸಹಾಯದಿಂದ ಬರುವಾಗ ಹಾದಿಯೇ ತೋಚದಾಗಲಿಲ್ಲ ತನ್ನ ಕೈಯ್ಯಲ್ಲಿರುವ ಒನಕೆಯಿಂದ ಬಂದು ಬಂಡೆಯನ್ನು ಹೊಡೆದು ಹಾದಿಮಾಡಿಕೊಂಡು ಹೋದನೆಂದು ಪ್ರತೀತಿ. ಹೌದೆಂಬಂತೆ ಒನಕೆಕಿಂಡಿಯನ್ನೂ ಹಾಗೂ ಕರ್ಪೂರದಮ್ಮನ ಗುಡಿಯಲ್ಲಿ ಒನಕೆಗಳನ್ನು ನೋಡಬಹುದು.

ಭೈರವನು ರಕ್ಕಸರನ್ನು ಸಂಹಾರ ಮಾಡುವ ದಾಹದಿಂದ ಪೂರ್ವದ ಕಡೆಗೆ ಹೋಗಲು ಪ್ರಯತ್ನಿಸುತ್ತಾನೆ. ನಿನ್ನ ಸಾಹಸ ಕಾರ್ಯಗಳನ್ನು ಇಲ್ಲಿಗೆ ನಿಲ್ಲಿಸೆಂದು ಈತನಿಗೆ ಅಡ್ಡಬಂದು ಹರಿಯುತ್ತಿರುವ ಝರಿಯಲ್ಲಿ ಸ್ನಾನ ಮಾಡುತ್ತಾಳೆ. ಇದನ್ನು ಅರ್ಥಮಾಡಿಕೊಂಡು ಹಿಂದಕ್ಕೆ ತಿರುಗಿ ಅಲ್ಲಿಯೇ ಐಕ್ಯವಾದನು. ಕರ್ಪೂರದಮ್ಮನೂ ಸಹ ಹಳ್ಳದ ದಡದಲ್ಲಿ ಐಕ್ಯವಾದಳಂತೆ ಈಗಲ್ಲಿ ಒಂದು ದೇವಾಲಯವಿದೆ.

**ಜೋಗಿ (ಗೋರಕ್ಷಕನಾಥ) :**

ಈ ದೇವಸ್ಥಾನವು ನುಂಕೇ ಭೈರವನ ದೇವಸ್ಥಾನದ ಎಡಭಾಗಲ್ಲಿದ್ದು ಪ್ರದಕ್ಷಿಣೆಗೆ ಅವಕಾಶವಿಲ್ಲದಂತೆ ಕಟ್ಟಲಾಗಿದೆ. ಗರ್ಭಗುಡಿ ಮತ್ತು ನಡುಗುಡಿಗಳೇ ಇಲ್ಲದ ಈ ದೇವಾಲಯದಲ್ಲಿ ದೇವರನ್ನು ಇಷ್ಟೊಂದು ಮುಂದುಗಡೆ ಪ್ರತಿಷ್ಠಾಪಿಸಿರುವುದು ಬೇರಾವುದೋ ಒಂದು ಯೋಗಿ (ಜೋಗಿ)ಯ ಸಂಕೇತವನ್ನು ಸೂಚಿಸುತ್ತದೆ ಈತನನ್ನು ಕಾಲಭೈರವ. ಜೋಗಿ ಗೋರಕ್ಷಕನಾಥ ಎಂದು ಕರೆಯುವ ವಾಡಿಕೆಯಿದೆ. ಈ ಮೂರು ಹೆಸರುಗಳಿಂದ ಕರೆಯುವ ಜೋಗಿಯನ್ನು ನುಂಕೇ ಭೈರವನ ಗುರುವಾಗಿಯೂ ಹಾಗೂ ಪ್ರತಿರೂಪವಾಗಿಯೂ 'ಚರಿತ್ರೆಯಲ್ಲಿ ಕಂಡು ಬರುತ್ತದೆ. ಮತ್ತು ನಾಥಪಂಥದ ಹಿನ್ನೆಲೆಯಲ್ಲಿ ಗೋರಕ್ಷಕನಾಥ ಎಂದು ಕರೆದಿರುವುದುಂಟು ಒಟ್ಟಿನಲ್ಲಿ ಎರಡನ್ನೂ ಒಂದೇ ದೇವರೆಂದು ಬಲ್ಲವರ ಅಭಿಪ್ರಾಯವಾಗಿದೆ.

ಕಾಲಕ್ಕೆ(ಯಮನಿಗೆ) ಭಯಂಕರನಾಗಿರುವುದರಿಂದ (ಜಯ) ಈತನಿಗೆ ಕಾಲಭೈರವನೆಂಬ ಹೆಸರುಂಟಾಗಿ ರುವುದು ಎಂದರೆ ಕಾಲವೇ ಪಾಶವು. ಇದನ್ನು ಶ್ರೀ ಆದಿನುಂಕೇಮಲೆಯ ಸಿದ್ಧಸಿಂಹಾಸನವೆಂದೂ ಕರೆಯುವರು. ಇದರ ಪ್ರತೀಕವಾಗಿಯೇ ಮೂರ್ತಿಗಳ ಹಿಂದೆ ಒಂದು ಕರಿಯ ಕಂಬಳಿ ಹಾಸಿ ಅದರ ಮೇಲೆ ಕೆಲವು ಆಯುಧಗಳನ್ನು ಮಾನವನ ತಲೆಬುರುಡಗಳನ್ನು ಇಡಲಾಗಿದೆ ಇದನ್ನೆ 'ಉರಿಗದ್ದುಗೆ' ಎಂದು ಕರೆಯುತ್ತಾರೆ. ಇದರ ಮೇಲೆ ಪಟ್ಟದ ಸ್ವಾಮಿಯು ದಸರಾಹಬ್ಬದಲ್ಲಿ ತಪಸ್ಸು ಕೂರುವ ಸಂಪ್ರದಾಯವಿದೆ. ಈ ಗದ್ದುಗೆಯನ್ನು ಗಮನಿಸಿದಾಗ ಈ ಕ್ಷೇತ್ರದಲ್ಲಿ ಯೋಗಿಗಳ ಬಂದು ತಪ್ಪಸ್ಸಾಚರಿಸುತ್ತಿದ್ದರು ಎಂದು ತಿಳಿಯಬಹುದು. ಚರಿತ್ರೆಯನ್ನು ನೋಡುವುದಾದರೆ ಈ ಹಿಂದೆ ಹೇಳಿದ ಹಾಗೆ ಜೋಗಿಯು ಕಾಲಭೈರವನ ಮತ್ತೊಂದು ರೂಪವೆಂದೂ ಅಥವಾ ಸಿದ್ದೇಶ್ವರನಿಗೆ ಗೋರಕ್ಷನಾಥನು ಗುರುವಾಗಿದ್ದನೆಂದು ತಿಳಿದು ಬರುತ್ತದೆ. ಇದರ ಪ್ರತೀಕವಾಗಿ ಈ ಕ್ಷೇತ್ರದಲ್ಲಿ ಈ ದೇವಸ್ಥಾನವನ್ನು ನಿರ್ಮಿಸಲಾಗಿದೆ. ನುಂಕೇಮಲೆ ಸಿದ್ದೇಶ್ವರನಿಗೆ ರಾಕ್ಷಸರ ಹತ್ತಿರ ವಿಷವಿರುವುದರಿಂದ ಇವರನ್ನು ಸಂಹಾರ ಮಾಡಲು ಅಸಾಧ್ಯವಿದ್ದರಿಂದ ಅಕ್ಕನ ಅಪ್ಪಣೆಯ ಮೇರೆಗೆ ಜೋಗಿಯ ವೇಷವನ್ನು ಧರಿಸಿ ಉಪಾಯದಿಂದ ವಿಷವನ್ನೆಲ್ಲಾ ಖಾಲಿ ಮಾಡಿ ರಕ್ಕಸರನ್ನೆಲ್ಲಾ ಸಂಹರಿಸುತ್ತಾನೆ.

ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಒಂದು ಭಾರಿ ಬೇಡರಾದ ಕಾಟಣ್ಣನವರ ಜಮೀನಿನ ಬನ್ನಿ ಮರದಡಿಯಲ್ಲಿ ಭೈರವನು ಜೋಗಿಯ ವೇಷದಲ್ಲಿ ಕುಳಿತಿರುತ್ತಾನೆ. ಇದನ್ನರಿತ ಕಾಟಣ್ಣ ತಮ್ಮ ಮನೆಗೆ ಕರೆದುಕೊಂಡು ಹೋಗಿ ಕರಿಯ ಕಂಬಳಿ ಹಾಸಿ ಬಿದಿರಕ್ಕಿ ಅನ್ನ ಕರಿಗುಬ್ಬಿ ಸಾರು ಎಡೆಹಾಕಿರುತ್ತಾರೆ. ಆಗ ಜೋಗಿಯು ಒಂದು ತ್ರಿಶೂಲ ನೆಟ್ಟು ಕಾಟಣ್ಣಾ ನನಗೂ ನಿನಗೂ ಗುರು ಈತ ಗೋರಕ್ಷನಾಥನೆಂದೂ ಈತನಿಗೆ ಎಡಹಾಕು ಎಂದು ಹಾಕಿಸಿದನು ಅಂದಿನಿಂದ ಈತ ಹುಟ್ಟಿ ಈಗ ಜೋಗಿಯ ಮಠದಲ್ಲಿ ಸುಮಾರು ತ್ರಿಶೂಲಗಳನ್ನು ಇಟ್ಟಿದ್ದಾರೆ. ವಾಲ್ಮೀಕಿ ಜನಾಂಗದವರು 'ಸಿದ್ದುಬುಕ್ತಿ' ಎಂದು ಮಾಡುವಾಗ ಈತನಿಗೆ ಮಾಂಸದ ಎಡೆಯನ್ನುಬಂಗಿತಪ್ಪಲು ಬ್ರಾಂದಿ - ಇವುಗಳನ್ನು ಎಡೆಹಾಕುವ ಪದ್ಧತಿಯಿದೆ.

ಹಾಗೂ ಪಾಳೆಯಗಾರರು ನಾಥಪಂಥದ ಜೋಗಿ ದೀಕ್ಷೆಗೆಟ್ಟದು ವರ್ಷಕ್ಕೊಂದು ಸಾರಿ ಜೋಗಪ್ಪನ ವೇಷ ಧರಿಸಿ ಬಿಕ್ಷಾಟನೆಗೆ ಹೋಗುತ್ತಿರುವುದು ತಿಳಿದು ಬರುತ್ತದೆ. ಸದರಿ ಮಠಕ್ಕೆ ಸೇರಿದ ಕಿನ್ನರಿ ಜೋಗಿಗಳಿಗೆ ಸುಂಕಮಲೆಯ ಮಠದಿಂದ ಬಿಕ್ಷಾಟನೆಗಾಗಿ ಹಕ್ಕು ಪತ್ರ ಕೊಟ್ಟು ಕಳಿಸುವರು ನಾಯಕನಹಟ್ಟಿ ಹತ್ತಿರ ದೇವರಹಳ್ಳಿಯಲ್ಲಿ ವೃತ್ತಿಗಾಯಕ ಕಿನ್ನರಿ ಜೋಗಿಗಳ ಒಂದು ಪಡೆಯೇ ಇದೆ. ಇವರು ಪ್ರತಿವರ್ಷ ಜಾತ್ರೆಯ ವೇಳೆಗೆ ಮಠಕ್ಕೆ ಕಾಣಿಕೆ ಒಪ್ಪಿಸುವರು ಈ ರೀತಿ ಜೋಗಿಗಳ ಪರಂಪರೆಯಿಂದಲೂ ಜೋಗಿ ಮಠವು ಬೆಳಕಿಗೆ ಬಂದಿರಲ್ಲಬಹುದು. ಒಟ್ಟಿನಲ್ಲಿ ಸುಂಕೆಮಲೆ ಸಿದ್ದೇಶ್ವರನಿಗೂ ಗೋರಕ್ಷಕನಾಥನಿಗೂ ಅವಿನಾಭಾವ ಸಂಬಂಧವಿದೆ.

**ಹರಳಯ್ಯ :**

ಹರಳಯ್ಯನಿಗೂ ಸುಂಕೇಮಲೆ ಭೈರವನಿಗೂ ಗಾಡವಾದ ಸಂಬಂಧವನ್ನು ಕಲ್ಪಿಸಬಹುದುದಾಗಿದೆ. ಈತನ ಎರಡು ಗುಡಿಗಳನ್ನೂ ''ಕೆಳಗಿನ ಈರ್ಲು'' 'ಮೇಲಿನ ಈರ್ಲು' ಎಂದು ಕರೆಯುತ್ತಾರೆ. '' ಈರ್ಲು'' ಎಂದರೆ ಮೊದಲ ಪೂಜೆ ಕೆಳಗಿನ ಈರ್ಲೆಂಬುದಕ್ಕೆ ಮೊದಲು ಮೇಲ್ಮುಚ್ಚಳಕೆ ಇರಲಿಲ್ಲ ಈಗ ಆಧುನಿಕ ಪ್ರಭಾವದಿಂದ ರೂಪಗೊಂಡಿದೆ. ಇದು ಕ್ಷೇತ್ರದ ಪ್ರವೇಶ ಭಾಗದಲ್ಲಿದ್ದು (ಪಶ್ಚಿಮದಿಕ್ಕು) ಚಿಕ್ಕದಾದ ಹೊಂಡವನ್ನು ನಿರ್ಮಿಸಿಕೊಂಡಿದೆ. ಮೇಲಿನ ಈರ್ಲು ಎಂಬುದು ಕ್ಷೇತ್ರದ ಪೂರ್ವದಿಕ್ಕಿನಲ್ಲಿದೆ. ಇದನ್ನು ಹರಳಯ್ಯನೇ ಪೂಜಿಸಬೇಕೆಂಬುದು ನಿಯಮವಿದೆ. ಹರಳಯ್ಯ ಎಂಬ ಹೆಸರನ್ನು ಗಮನಿಸುವುದಾದರೆ ಹಳ್ಳಿಗಳಲ್ಲಿ ತುಚ್ಛ ಭಾವನೆಯಿಂದ ಮೊದಿಗನೆಂದು ಕರೆಯುವ ಜಾತಿಯವನು ಇವರನ್ನು ಈ ಕ್ಷೇತ್ರಕ್ಕೆ ಬರುವ ಯೋಗಿಗಳು ಹರಳಯ್ಯನೆಂದು ಕರೆದರು ಈಜನರಿಗೆ ಯೋಗ್ಯವಾದ ಅನ್ವರ್ಥನಾಮವಾಗಿರುವಂತೆ ತೋರುವುದು,) ಜಗನ್ಮಾತೆಯ ವೃಗವರ್ಗವು ಮೊಗ್ಗಾದರೆ ಮಾನವನು ಪ್ರಫುಲ್ಲವಾದ ಅರಳಾಗಿರುವನು ಆಗ ತಾನೇ ವಿಕಸಿಸಿದ ಕುಸುಮವನ್ನು ನಯಕನ್ನಡಿಗರು ಅರಳೆನ್ನುವರು. ಇದರಂತೆ ಕನ್ನಡದ ಯೋಗಿ (ಜೋಗಿ)ಗಳು ಆದಿಮಾನವ ವರ್ಗದವರನ್ನು ಅರಳಯ್ಯನೆಂದು ಕರೆದಿರುವುದು. ಇವರು ಅರಳಾದರೆ ಸಿದ್ಧಪುರುಷರು ಪ್ರಪಂಚದ ವೃಕ್ಷದ ಪರಿಪಕ್ವ ಫಲಗಳಾಗಿರುವರು ಇಂತಹ ಹೆಸರನ್ನು ಹೊಂದಿ ಶಿವಶರಣನಾಗಿ ಶಿವನ ರೂಪದ ತ್ರಿಶೂಲವನ್ನು ಧರಿಸಿ ಗುಡಿಯನ್ನು ಸ್ಥಾಪಿಸಿಕೊಂಡಿದ್ದಾನೆಂದು ಹೇಳಬಹುದು ಕ್ರಮೇಣ ಅವನ ಜಾತಿಯವರು ಪೂಜಿಸಲಾರಂಬಿಸಿದರು ಎಂದು ತಿಳಿಯಬಹುದು.



ಇನ್ನೊಂದು ದೃಷ್ಟಿಯಲ್ಲಿ ಹರಳಯ್ಯನನ್ನೇಕೆ ಅರ್ಚಕನನ್ನಾಗಿ ನಿಯಮಿಸಿದ್ದಾರೆಂಬುದಕ್ಕೆ ಮಹತ್ವದ ಸಂಗತಿಯೊಂದನ್ನು ಗಮನಿಸಬಹುದು. ಈಶ್ವರಾಧನೆಯನ್ನು ಮಾಡಲು ಸರ್ವರಿಗೂ ಬಾಧ್ಯತೆಯುಂಟೆಂಬುದನ್ನು ತಿಳಿಸುವುದಕ್ಕೆ ಮತ್ತು ಆದಿಯಲ್ಲಿ ಈಶ್ವರನನ್ನು ಆರಾಧಿಸುವವನು ಇವನೇ ಎಂಬುದನ್ನು ಘೋಷಿಸುವುದಕ್ಕೆ ಯಾತ್ರಿಕನು

ಇಲ್ಲಿಗೆ ಬಂದು ನೋಡಿ ಈ ಪದ್ಧತಿಯು ಅರ್ಪೇಯವಾಗಿ ನಡೆದುಕೊಂಡು ಬಂದಿರುವುದೆಂಬುದನ್ನು ಕೇಳಿ ಆಶ್ಚರ್ಯಪಟ್ಟು ಸರ್ವರೂ ಸಹೋದರರೆಂಬುದನ್ನು ಸೌಹಾರ್ದ ಸಹಾನುಭೂತಿಯನ್ನು ಕಲಿಸುವುದಕ್ಕಾಗಿ ಬಹುಕಾಲ ಮರೆತು ಹೋಗಿದ್ದ ಈ ಪಾಠವನ್ನು ಜ್ಞಾಪಿಸಿಕೊಳ್ಳುವುದಾಗಿದೆ. 'ಈರ್ಲು' ಎಂಬುದಕ್ಕೆ ಮೊತ್ತೊಂದು ಹೆಸರನ್ನು ಗಮನಿಸಬಹುದು. ಹೆತ್ತ ಹತ್ತೆನೆಯ ದಿನದ ಮಂಗಳಸ್ನಾನ ಕಾರ್ಯಕ್ಕೆ ಈ ಹೆಸರಿದೆ ಈ ಹಿಂದೆ ಹೇಳಲಾದ ಮೊದಲ ಪೂಜೆ ಎಂದರೆ ಮಾನವನ ಆದಿಜನ್ಮವನ್ನು ಸೂಚಿಸುವುದು. ಆದಿಯಲ್ಲಿ ದೇವರನ್ನು ಪೂಜಿಸಿದವನು ಮಾನವನೇ ಹೊರತು ಪ್ರಾಣಿಯಲ್ಲ ಎಂಬುದಾಗಿದೆ. ಕೆಳಗಿನ ಈರ್ಲಿಗೆ ಮೇಲ್ಮುಚ್ಚದಿಲ್ಲದಿರುವುಕೆಯನ್ನು ಗಮನಿಸಿದಾಗ ಪೂರ್ವಿಕರಿಗೆ ಮನೆಗಳನ್ನು ಕಟ್ಟಿಕೊಳ್ಳಲು ಸರಿಯಾಗಿ ತಿಳಿದಿರಲಿಲ್ಲವೆನ್ನುವುದನ್ನು ಧ್ವೋದಿಸುತ್ತದೆ. ಒಟ್ಟಲ್ಲಿ ಆದಿಮಾನವನ ಸಂಸ್ಕೃತಿಯನ್ನು ಇದು ಪ್ರತಿಬಿಂಬಿಸುತ್ತದೆ.

ಈ ಕ್ಷೇತ್ರದಲ್ಲಿ ಶುಭ ಸಮಾರಂಭಗಳೇನಾದರೂ ಮಾಡಿದಾಗ ಮತ್ತು ಜಾತ್ರೆಯಲ್ಲಿ ಸಾಕಷ್ಟು ಮರ್ಯಾದೆಗಳು ಸಲ್ಲುತ್ತವೆ. ಸಿಡಿಮಾಡಿದ ನಂತರ ಭಕ್ತಾದಿಗಳು ಕೊಂಡಿ ದುಡ್ಡು ಎಂದು ಕೊಡುವುದು ತೇರು ಹರಿಯುವಾಗ ಮೊದಲು ಪೂಜಿಸಿ ತೇರಿನ ಒಂದೇ ಗಾಲಿಯ ಹತ್ತಿರ 'ಬಲಿಅನ್ನ' ಎಂದು ಹಾಕಿದ ಎಡೆಯನ್ನು ತೆಗೆದುಕೊಳ್ಳುವುದು ಸುಂಕಪ್ಪನಿಗೆ "ಸಿದ್ದುಬುಕ್ತಿ" ಮಾಡುವ ವಾಲ್ಮೀಕಿ ಜನ ಸಮುದಾಯದವರೊಂದಿಗೆ ಭಾಗವಹಿಸುವುದು ಸುಂಕಪ್ಪನ ಪ್ರತಿಯೊಂದು ಕಾರ್ಯವಿಧಾನಗಳಿಗೂ ಸಹ ಹರಳಯ್ಯನು ಬೇಕಾದವನು/ಒಟ್ಟಿನಲ್ಲಿ ಹರಳಯ್ಯನಿಗೂ ಸುಂಕಪ್ಪನಿಗೂ ಗಾಢವಾದ ಸಂಬಂಧವಿರುವುದನ್ನು ಗುರುತಿಸಬಹುದಾಗಿದೆ.

ಈತನ ಚರಿತ್ರೆಯನ್ನು ಗಮನಿಸಿದಾಗ ಇನ್ನೂ ಕೆಲವು ಸಂಬಂಧಿತ ಅಂಶಗಳನ್ನು ಕಾಣಬಹುದು. ಸುಂಕೇಮಲೆ ಸಿದ್ದೇಶ್ವರನಿಗೆ ಹರಳಯ್ಯನು ಎಂದಿಗೂ ಸಹ ಅಂತರಂಗದ ಭಕ್ತನಾಗಿದ್ದಾನೆ. ತನಗೇನಾದರೂ ಕಷ್ಟಬಂದರೆ ಪರಮಾತ್ಮನನ್ನು ಧ್ಯಾನ ಮಾಡಿದರೆ ಹರಳಯ್ಯನು ಸಹಾಯ ಮಾಡಲು ಮುಂದೆ ಬರುತ್ತಾನೆ. ಸುಂಕಪ್ಪನೊಂದಿಗೆ ಹರಳಯ್ಯನನ್ನು ಮುಖಾಮುಖಿಯಾಗಿಸುವುದು. ಒಂದು ವೈಶಿಷ್ಟ್ಯ ಹರಳಯ್ಯ ಬಸವಣ್ಣನ ಕಾಲದ ಕೆಳಜಾತಿಗೆ ಸೇರಿದ ಒಬ್ಬ ಶಿವಶರಣ ಸುಂಕೇ ಭೈರವನಿಗೆ ದಿಕ್ಕು ತೋಚದಂತಾಗಲು ಹರಳಯ್ಯ ಸಹಾಯಕ್ಕೆ ಬಂದು ತನ್ನ ಕಾಲಿನ ಹೆಬ್ಬೆರಳಿನ ಒಂದು ನರವನ್ನು ಕಿತ್ತುಕೊಟ್ಟನಂತೆ. ಸ್ಮರಣಾರ್ಥವಾಗಿ ಮೊದಲ ಪೂಜೆ ನಿನ್ನ ಭಕ್ತರಿಂದ ನನಗೆ ಸಲ್ಲಬೇಕೆಂಬುದೂ ಎರಡನೆಯದಾಗಿ ತನ್ನ ಹೊಂಡದಲ್ಲಿ ಜಾತಿ ಭೇದವಿಲ್ಲದೆ ನೀರನ್ನು ಬಳಸಬೇಕೆಂಬ ಹರಳಯ್ಯನ ಬೇಡಿಕೆಗಳನ್ನು ಭೈರವನು ಪೂರೈಸಿಕೊಟ್ಟನು. ಇದಕ್ಕೆ ಸಾಕ್ಷಿಗಳೇನೋ ಎಂಬಂತೆ ಹರಳಯ್ಯನ ಚಿಕ್ಕ ಗುಡಿಗಳನ್ನು ಎರಡೂ ಕಡೆಗೂ ಸಹ ನಿರ್ಮಿಸಲಾಗಿದೆ. ಈ ಮಠಕ್ಕೆ ಬರಲು ಎರಡು ಮಾರ್ಗಗಳುಂಟು ಭಕ್ತಾದಿಗಳು ಪೂರ್ವದ ಕಡೆಯಿಂದಲೂ ಬಂದರೂ ಪಶ್ಚಿಮದ ಕಡೆಯಿಂದ ಬಂದರೂ ಸಹ ಹರಳಯ್ಯನಿಗೆ ಪೂಜೆ ಸಲ್ಲಿಸಿಯೇ ಮುಂದೆ ಹೋಗುವ ಹಾಗೆ ವ್ಯವಸ್ಥೆ ಮಾಡಲಾಗಿದೆ.

**ಸುಂಕವ್ವನ ವಿಗ್ರಹ :**

ಇದು ಹನುಮಂತರಾಯನ ಮೂರ್ತಿಯ ಪಕ್ಕದಲ್ಲಿ ಕಂಡುಬರುತ್ತದೆ. ಇದು ತಲೆ ಮಾತ್ರ ಕಾಣುವ ವಿಗ್ರಹವಾಗಿದ್ದು ಕೆಲವು ಎಲ್ಲಮ್ಮ ಎಂತಲೂ ಕರೆಯುವರು. ಹೆಚ್ಚಿನದಾಗಿ ಸುಂಕವ್ವ ವಿಗ್ರಹವೆಂತಲೂ ಕರೆದು ಇದರ ಪಕ್ಕದಲ್ಲಿ ಮರಿಯವ್ವನ ವಿಗ್ರಹವಿದ್ದು, ಇದು ಹಾಗಾಗಿದೆ ಎಂದು ಹೇಳುತ್ತಾರೆ.

ಜೋಗಿ ವೇಷವನ್ನು ಧರಿಸಿ ಬಂದ ಸುಂಕಪ್ಪನಿಗೆ ಸುಂಕವ್ವಮಲಿಯವ್ವ ಎಂಬ ರಕ್ಷಸರ ದಾಸಿಯರು ವಿಷವನ್ನೆಲ್ಲಾ ಪೂರ್ತಿಯಾಗಿ ಬಿಕ್ಷೆ ನೀಡುವರು. ರಕ್ಕಸರನ್ನೆಲ್ಲಾ ಸಂಹರಿಸಿದಾಗ ಸುಂಕವ್ವ ಮಲಿಯವ್ವ ಎಂಬ ದಾಸಿಯರು ತಮಗೂ ಉಳಿಗಾಲವಿಲ್ಲವೆಂದು ಭೂಮಾರ್ಗವಾಗಿ ಇಳಿದು ಹೋಗುವಾಗ ಭೈರವ ಬಂದು ಜಡೆಗಳನ್ನು ಹಿಡಿದು ಮೇಲ್ಕೆತ್ತಿ ನಿಮ್ಮಿಂದ ತುಂಬಾ ಉಪಕಾರವಾಯಿತೆಂದು ಕೃತಜ್ಞತೆಗಳನ್ನು ಸಲ್ಲಿಸುತ್ತಾನೆ. ಅದರ ಕುರುಹಾಗಿ ತಲೆಮಾತ್ರ ಕಾಣುವ ಸುಂಕವ್ವನ ವಿಗ್ರಹವಿದೆ. ಹಾಗೂ ಸುಂಕೇಮಲೆ ಸಿದ್ದೇಶ್ವರನ ಮೂರ್ತಿಯ ಅಕ್ಕಪಕ್ಕದಲ್ಲಿ ಸುಂಕವ್ವ - ಮಲಿಯವ್ವ ಎಂಬ ವಿಗ್ರಹಗಳಿರುವುದನ್ನು ಗಮನಿಸಬಹುದು.'

ಪ್ರತಿಭಾನುವಾರ ವಾರದ ಪೂಜೆ ನಡೆಯುವಾಗ ಈ ವಿಗ್ರಹಕ್ಕೆ ಎಡೆ ಹಾಕಿ ಪೂಜಿಸುವ ಸಂಪ್ರದಾಯವುಂಟು ಜಾತ್ರೆಯ ಸಂದರ್ಭದಲ್ಲಿ ಹಾಗೂ ವಿಶೇಷ ದಿನಗಳಲ್ಲಿ ಎಣ್ಣೆಯನ್ನು ಹಾಕಿ ಹೂಗಳನ್ನು ಹೊದಿಸಿ ಪೂಜಿಸುತ್ತಾರೆ.

**ಹನುಮಂತರಾಯ :**

ಈ ಕ್ಷೇತ್ರದಲ್ಲಿ ಎರಡು ಹನುಮನ ವಿಗ್ರಹಗಳಿವೆ. ಇವುಗಳನ್ನು ತಗ್ಗಿನ ಹನುಮದ್ದಯ್ಯರು ಎಂದು ಕರೆಯುವ ರೂಢಿಯಲ್ಲಿದೆ. ಒಂದು ಚಿಕ್ಕ ಗುಡಿ ಸ್ಥಾಪನೆಯಾಗಿದೆ ಸುಂಕೇ ಮಲೆ ಭೈರವನು ಬೆಟ್ಟ ಹತ್ತಿಸುವಾಗ ಕುದುರೆಯ ಲಗಾಮು ಹರಿದಾಗ ತನ್ನ ತಂದೆಯನ್ನು ಸ್ಮರಿಸುತ್ತಾ ಒಂದು ಹುಲ್ಲು ಕಡ್ಡಿನಿಂದ ಬಂಡೆಯ ಮೇಲೆ ಹುಮಂತನ ಚಿತ್ರವನ್ನು ಬರೆದನೆಂದು ನಂಬಿಕೆ ಅದರ ಕುರುಹೆಂಬಂತೆ ಆ ಜಾಗದಲ್ಲಿ ಹನುಮಂತನ ಚಿತ್ರವನ್ನು ಕಾಣಬಹುದು. ಹನುಮಂತನ ಧೈರ್ಯ ಸಾಹಸಗಳಂತೆ ಭೈರವನಿಗೂ ಅನ್ವಯಿಸುವ ಸಾಧ್ಯತೆಯಿದೆ ಎಂಬಂತೆ ಇವರಿಬ್ಬರಿಗೂ ಸಂಬಂಧ ಕಲ್ಪಿಸಲಾಗಿದೆ.'

ಇನ್ನೊಂದು ರೀತಿಯಲ್ಲಿ ನೋಡುವುದಾದರೆ ನಮ್ಮ ಹಿಂದೂಧರ್ಮದ ಪ್ರಕಾರ ಯಾವುದೇ ಕೋಟೆ ಕೊತ್ತಲುಗಳಲ್ಲಿಯೂ ಸಹ ಹನುಮಂತನ ವಿಗ್ರಹಗಳಿರುವುದನ್ನು ಗಮನಿಸಬಹುದು ಹಾಗೆಂದು ಕದಂಬರು ಹನುಮನ ವಿಗ್ರಹಗಳನ್ನು ಸ್ಥಾಪಿಸಿರಲೂಬಹುದು. ಹನುಮಂತನ ಎರಡು ವಿಗ್ರಹಗಳಿದ್ದು 'ಪಡೆಹನುಮ' ಎಂದೂಸಹ ಕರೆಯುವರು 'ಪಡೆಹನುಮ' ಎಂದರೆ ಈ ಬೆಟ್ಟದ ಸಂಕೇತ ಅಥವಾ ಅಭಿಮಾನದೇವರು ಎಂದು ಗ್ರಹಿಸಬಹುದು.) ಗಂಗಾ, ತುಂಗಾ, ಕಾವೇರಿ, ಚಾಮುಂಡಿ ಪರ್ವತ ಇಂತಹ ಶ್ರೇಷ್ಠವಾದ ಸ್ಥಳಗಳಿಗೆ ಅಭಿಮಾನ ದೇವತೆಗಳು ರಕ್ಷಕರಾಗಿರುವಂತೆ ಸುಂಕೇಮಲೆಯು ಕ್ಷೇತ್ರಕ್ಕೆ ರಕ್ಷಕನಾಗಿ ಈ ಬೆಟ್ಟದ ಯೋಗಕ್ಷೇಮವನ್ನು ನೋಡಿಕೊಳ್ಳಲು ಪರಮೇಶ್ವರನಿಂದ ನಿಯಮಿತವಾಗಿರುವ ದೇವತೆಗಳಿಗೆ ಅಭಿಮಾನ ದೇವತೆಗಳೆಂದು ಹೆಸರು. ಇವರು ಕಣ್ಣಿಗೆ ಕಾಣಿಸುವುದಿಲ್ಲವಂತೆ.

**ಮೂಗುಬಸಪ್ಪ :**

ಮೂಗು ಬಸಪ್ಪನನ್ನು ಉಣ್ಣೆಯ ಬಸಪ್ಪನೆಂದೂ ಕರೆಯುವರು ಇದು ಬೆಟ್ಟದ ಹೊರಗೆಯಲ್ಲಿ ಒಂದು ಆಲದ ಮರದ ಕೆಳಗಡೆ ಒಂದು ಚಿಕ್ಕ ಗುಡಿಯಿದೆ. ಇದು ಕ್ಷೇತ್ರಕ್ಕೆ ಕಾವಲುಗಾರನಾಗಿ ಬಸವಣ್ಣನ ರೂಪದಲ್ಲಿ ಕುಂತಿರುತ್ತದೆ. ಇದನ್ನು ಜನಪದರು ಸುಂಕಪ್ಪನ ತಂದೆ ಮಲ್ಲಿಕಾರ್ಜುನನ ವಾಹನವೆಂದು ಕರೆಯುವರು. ದನಗಳಿಗೆ ಉಣ್ಣೆಬಿದ್ದರೆ ಒಳಿಗೆ ಎಡೆ ಹಾಕಿದರೆ ಉಣ್ಣೆ ಹೋಗುವವೆಂಬ ನಂಬಿಕೆಯಿಂದ ಓಳಿಗೆಯನ್ನು ಬಸವಣ್ಣನಿಗೆ ಹೊದಿಸುವರು.

## ೬. ನುಂಕೇಮಲೆ ಭೈರವ ಮತ್ತು ವಿವಿಧ ಜನ ಸಮುದಾಯಗಳು

ನುಂಕೇಮಲೆ ಭೈರವನನ್ನು ವಿವಿಧ ಜನಸಮುದಾಯಗಳು ತಮ್ಮ ಮನೆದೇವರೆಂದು ಪೂಜಿಸುವ ಪದ್ಧತಿಯುಂಟು ಮೊಳಕಾಲ್ಮುರು ಸೇರಿದಂತೆ ಸುತ್ತ ಮೂವತ್ಮೂರು ಹಳ್ಳಿಗಳ ಭಕ್ತಾದಿಗಳಲ್ಲಿ ವಾಲ್ಮೀಕಿ ಜನಾಂಗದವರು ಹೆಚ್ಚಿನದಾಗಿ ಕಂಡು ಬರುತ್ತಾರೆ. ತಮ್ಮ ಮನೆದೇವರೆಂದು ನಡೆದುಕೊಳ್ಳುತ್ತಾ ನುಂಕಪ್ಪ, ಸಿದ್ದಣ್ಣ, ನುಂಕಮ್ಮ, ಭೈಯಣ್ಣ ಎಂದು ಹೆಸರುಗಳನ್ನು ಹೊಂದಿರುತ್ತದೆ. ಪ್ರಧಾನ ಸಂಸ್ಕೃತಿಗೆ ಮುಖಾ ಮುಖಿಯಾಗಿ ಪ್ರತಿ ಸಂಸ್ಕೃತಿಗಳಾದ ಮಾದಿಗ, ಮ್ಯಾಸಬೇಡ ಸಂಸ್ಕೃತಿಗಳು ಕಂಡು ಬರುತ್ತದೆ. ವಾಲ್ಮೀಕಿ ಜನಾಂಗದವರು ಸಿದ್ದುಬುಕ್ತಿಯೆಂದು ವಿಶೇಷವಾಗಿ ಆಚರಿಸುವುದುಂಟು. ಹರಿಜನ ಸಮುದಾಯವನ್ನು ಇಲ್ಲಿ ಹರಿಜನ ಎಂದು ಕರೆಯದೆ 'ಗೊರವರು' ಎಂದು ಕರೆಯುವ ವಾಡಿಕೆಯಿದೆ. ಇವರಿಗೆ ಜಾತ್ರೆಯಲ್ಲಿ ವಿಶೇಷವಾದ ಮಾನಮರ್ಯಾದೆಗಳು ಸಲ್ಲುತ್ತವೆ ನಾಥಪಂಥ ಚಿತ್ರದುರ್ಗ ಪಾಳೇ ಗಾರರ ಪೂರ್ವ ಕಾಲಕ್ಕೆ ಉಚ್ಛ್ರಾಯ ಸ್ಥಿತಿಯಲ್ಲಿದ್ದದ್ದು ಹಾಗೂ ನಂತರದ ದಿನಗಳಲ್ಲಿಯೂ ಕೂಡಾ ಪಾಳೆಯಗಾರರು ನಾಥಪಂಥದ ಜೋಗಿದೀಕ್ಷೆ ಪಡೆದು ವರ್ಷಕ್ಕೊಂದು ಸಾರಿ ಜೋಗಪ್ಪನ ವೇಷ ಧರಿಸಿ ಬಿಕ್ಷಾಟನೆಗೆ ಹೋಗುತ್ತಿದ್ದುದು ತಿಳಿದುಬರುತ್ತದೆ.

ಸದರಿ ಮಠಕ್ಕೆ ಸೇರಿದ ಕಿನ್ನರಿ ಜೋಗಿಗಳಿಗೆ ನುಂಕೇಮಲೆಯ ಮಠದಿಂದ ಬಿಕ್ಷಾಟನೆಗಾಗಿ ಹಕ್ಕು ಪತ್ರಕೊಟ್ಟು ಕಳಿಸುವರು ಕಿನ್ನರಿ ಜೋಗಿಗಳು ಪ್ರತಿವರ್ಷ ಜಾತ್ರೆಯ ವೇಳೆಗೆ ಮಠಕ್ಕೆ ಕಾಣಿಕೆ ಒಪ್ಪಿಸುವರು. ನಾಯಕ ಹಟ್ಟಿ ಹತ್ತಿರ ದೇವರ ಹಳ್ಳಿಯಲ್ಲಿ ವೃತ್ತಿ ಗಾಯಕ ಕಿನ್ನರಿ ಜೋಗಿಗಳ ಒಂದು ಪಡೆಯೇ ಇದೆ. ಇವರ ವಿಶೇಷವೆಂದರೆ ಜಾತ್ರೆಯ ದಿವಸ ಇವರುಗಳು ಇಲ್ಲಿಯೂ ಕಾಣಸಿಗುವುದಿಲ್ಲ.

- ಕುಂಬಾರರು ಜಾತ್ರೈಯಲ್ಲಿ ಎಡೆ ಮಾಡಲು ಮಣ್ಣಿನ ಪಾತ್ರೆಗಳನ್ನು ಕೊಡುವುದು. ಕಾರ್ತೀಕದಲ್ಲಿ ಮಣ್ಣಿನ ದೀಪಗಳನ್ನು ಕೊಡುವ ಪದ್ಧತಿಯುಂಟು.
- ದಸರಾ ಹಬ್ಬದಲ್ಲಿ ಸ್ವಾಮಿಯು ಪಟ್ಟಕ್ಕೆ ಕೂರುವಾಗ ಆಚಾರಿಯು ಸ್ವಾಮಿಯನ್ನು ಜೋಗಿಯ ಮಠಕ್ಕೆ ಕರೆದೊಯ್ಯುವ ಸಂಪ್ರದಾಯವಿದೆ.
- ತೇರು ಹರಿಯುವಾಗ ನಾಲ್ಕು ಗಾಲಿಗಳಿಗೂ ಹಾಕಿದ ಬಲಿ ಅನ್ನವನ್ನು ವಾಲ್ಮೀಕಿಗಳು, ಹರಿಜನರು, ಮಡಿವಾಳರು, ಆಚಾರಿಗಳು ತೆಗೆದುಕೊಳ್ಳುವ ಪದ್ಧತಿಯುಂಟು.
- ತೇರು ಹರಿಯುವುದಕ್ಕಿಂತ ಮುಂಚೆ ಬಡಗಿಯು ತೇರನ್ನು ಪ್ರದಕ್ಷಿಣೆ ಮಾಡುವ ಸಂಪ್ರದಾಯವಿದೆ.
- ಅಗಸರು ತಡಿಮುಡಿಯನ್ನು ಹಾಸುತ್ತಾರೆ.
- ಮುಸ್ಲಿಂ ಜನಾಂಗದವರೂ ಸಹ ಭೈರವನ ದರ್ಶನ ಪಡೆಯುತ್ತಾರೆ.
- ಗೊಲ್ಲರ ಹೆಣ್ಣು ಮಕ್ಕಳು ವಿಶೇಷವಾಗಿ ಸೋಬಾನೆ ಪದಗಳನ್ನು ಹೇಳುತ್ತಾರೆ.
- ವೀರಶೈವರು ಹೆಚ್ಚಿನದಾಗಿ ಮಲ್ಲಿಕಾರ್ಜುನನ ದೇವಾಲಯದಲ್ಲಿ ಪೂಜಾ ಕಾರ್ಯ ಕ್ರಮಗಳನ್ನು ಆಚರಿಸುತ್ತಾರೆ. ಒಟ್ಟಿನಲ್ಲಿ ನುಂಕೇಮಲೆಯು ಬಹು ಜನ ಸಮುದಾಯಗಳ ಸಂಗಮವಾಗಿದೆ.

ಭೈರವರಾಧನೆ ಎಂಬ `ಹೊಳಹು`ವನ್ನು ಅವಲೋಕಿಸಿದಾಗ ಮಹಾರಾಷ್ಟ್ರ, ತಮಿಳು ನಾಡುಗಳಲ್ಲದೆ ಕರ್ನಾಟಕದಲ್ಲಿಯೂ ಸಹ ಈ ದೇವರನ್ನು ಆರಾಧಿಸುವುದು ಕಂಡು ಬರುತ್ತದೆ. ಊರಿಗೊಂದು ಬೇರೇ ದೇವರ ಗುಡಿ ಎಂಬ ಗಾದೆಯನ್ನು ಗಮನಿಸಿದಾಗ ಭೈರವನೇ ಬೋರೇದೇವರಾಗಿರಬಹುದೆಂದು ಊಹೆ ಮಾಡಲು ಸಾಕಷ್ಟು ಕಾರುವುಗಳು ದೊರೆಯುತ್ತವೆ. ಇದು ಜಾತಿಸೂಚಕ ಪದ ಎಂದು ಕೆಲವರ ಅಭಿಪ್ರಾಯ ಮತ್ತೆ ಕೆಲವರು ಶಿವನು ಪೂರ್ವದಲ್ಲಿ ಕಾಲಭೈರವನ ರೂಪ ದಾಳಿದ್ದರಿಂದ ಹರಿಜನರು, ಗಿರಿಜನರು ಆರಾಧಿಸುತ್ತಿರುವ ಹಿನ್ನೆಲೆಯಲ್ಲಿ ಇವರನ್ನು ಭೈರರು ಎಂಬುದಾಗಿಯೂ ಕೆಲವರ ಮಾತು. ಡಿ. ಲಿಂಗಯ್ಯನವರ 'ಬೋರೇ ದೇವರು' ಎಂಬ ಗ್ರಂಥದಲ್ಲಿ ಭೈರವ ಎಂಬ ಪದದ ನಿಷ್ಪತ್ತಿ ಹೇಳುತ್ತಾ ಬೈಯ್ಯರೂವ, ಭೈರೂವ, ಭೈರುವ ಎಂದು ಹೇಳಿ ಶಿವನ ಭೈರವ ರೂಪ ವೆಂದು ಹೇಳುತ್ತದೆ. ಭೈರವನ ಪದದ ನಿಷ್ಪತ್ತಿಯ ವಿಚಾರವಾಗಿ ಚರ್ಚಿಸುವಾಗ ಈ ದೇವರ ಆರಾಧಕರು ಬಹುತೇಕವಾಗಿ ಹಿಂದುಳಿದ ಜನಾಂಗದವರಾಗಿ ಕಂಡುಬರುತ್ತಾರೆ. ನಮ್ಮ ನಾಡಿನಲ್ಲಿ ಹಲವಾರು ಬೋರೆದೇವರ ಗುಡಿಗಳಿದ್ದು ಹೆಚ್ಚಿನದಾಗಿ ವಾಲ್ಮೀಕಿ ಜನಾಂಗದವರು ಈ ದೇವರನ್ನು ಆರಾಧಿಸುತ್ತಾ ಬೋರಯ್ಯ, ಬೈಯ್ಯಣ್ಣ ಎಂಬಂತಹ ವ್ಯಕ್ತಿನಾಮಗಳನ್ನು ಸಹ ಹೊಂದಿದ್ದಾರೆ. ಬೈಯ್ಯರೂವ ಎಂಬುದು ಬೈಯ್ಯಣ್ಣನಾಗಿಯೂ ಭೈರವ ಎಂಬುದು ಬೋರಯ್ಯ ಎಂಬುದಾಗಿಯೂ ಪರ್ಯಾಯ ನಾಮಗಳು ಬಂದಿರಬಹುದೆಂದು ಡಿ.ಲಿಂಗಯ್ಯನವರು ಹೇಳುವ ಈ ಪದಗಳಿಗೆ ಸಂಬಂಧಕಲ್ಪಿಸಲಾಗಿದೆ. ಹಾಗೆಯೇ ಪಾಳೆಯಗಾರ ಅರಸ ಭೈರನಿಂದ ಈ ಹೆಸರು ಬಂದಿದೆ ಎಂದು ಹೇಳುವ ಪಿ.ಕಮಲಾಕ್ಷರವರ ಹೇಳಿಕೆಗೆ ಈ ಮೇಲಿನ ಮಾತುಗಳಿಗೆ ಪುಷ್ಠಿಕೊಡುತ್ತವೆ.

ಭೈರವಾರಾಧನೆ ಹಿನ್ನೆಲೆಯನ್ನು ಗಮನಿಸಿದಾಗ ನಮ್ಮ ನಾಡಿನಲ್ಲಿ ಬಹುತೇಕ ಭಾಗಗಳಲ್ಲಿ ಒಡೆದ ಮೂರ್ತಿಗಳು ಸಿಗುತ್ತವೆ. ಉದಾಹರಣೆಯಾಗಿ ನೋಡುವುದಾದರೆ ನಾಯಕನಹಟ್ಟಿಗೆ ಸುಮಾರು ೧೦-೧೫ ಕಿ.ಮೀ. ದೂರದಲ್ಲಿರುವ ಬೊಮ್ಮನಹಳ್ಳಿ ಎಂಬ ಗ್ರಾಮದಲ್ಲಿ ಬೋರೇ ದೇವರ ಗುಡಿಯ ಇದ್ದು ಮೂರ್ತಿಯು ಭಗ್ನಗೊಂಡಿದ್ದು ಮೂರು ಗುಂಡುಗಳನ್ನು ಹಾಗೂ ಒಂದು ತ್ರಿಶೂಲವನ್ನು ಇಟ್ಟು ವಾಲ್ಮೀಕಿ ಜನಾಂಗದವರು ಪೂಜಿಸುವ ಪದ್ಧತಿಯುಂಟು. (ದಕ್ಷಿಣ ಕನ್ನಡ ಜಿಲ್ಲೆಯ ಭೈರರು) ಆದರೆ ನುಂಕೇಮಲೆಯಲ್ಲಿರುವ ಭೈರವನ ಮೂರ್ತಿಗೆ ಯಾವುದೇ ಶತೃದಾಳಿನಡೆದಿಲ್ಲರುವುದಕ್ಕೆ ಕಾರಣ ೯-೧೦ ನೆಯ ಶತಮಾನದಿಂದ ಕದಂಬರು ಸಂಘರ್ಷದಿಂದ ಈ ಮೂರ್ತಿಗಳು ನಾಶವಾಗದಂತೆ ರಕ್ಷಣೆ ನೀಡಿರಬಹುದು.

ಹರಿಜನ-ಗಿರಿಜನರ ಪ್ರಭಾವವೇ ಈ ಕ್ಷೇತ್ರದಲ್ಲಿ ಎದ್ದು ಕಾಣುವುದರಿಂದ ಈ ಮೇಲೆ ಹೇಳಿದ ಹಿರಿಯರ ಮಾತುಗಳು ಸತ್ಯಕ್ಕೆ ಹತ್ತಿರವಾಗಿವೆ. ಬಹುತೇಕವಾಗಿ ಭೈರವನನ್ನು ವಚನಕಾರರು ತೆಗಳಿದ್ದಾರೆಲ್ಲದ ಮೈಲಾರಲಿಂಗನನ್ನು ಸಹ ದೂಷಿಸಿಕೊಂಡಿದ್ದಾರೆ. ಭೈರವನನ್ನೇಕೆ ಅವರು ಅಷ್ಟೊಂದು ಆವೇಶದಿಂದ ತೆಗಳಿದ್ದಾರೆಂಬುದಕ್ಕೆ ಹಾಗೂ ಅದರ ಹಿನ್ನೆಲೆಯ ರಹಸ್ಯ ಇನ್ನೂ ನಿಗೂಢವಾದ ವಿಷಯವಾಗಿದೆ. ಇನ್ನು ಅವರ ವಚನಗಳನ್ನು ನೋಡುವುದಾದರೆ.

೧. ಮಿಂಡ ಮೈಲಾರ ಬೀರ ಭೈರವ ಎಕ್ಕನಾದಿ
ಕುಕ್ಕನೂರ ಬಸದಿಕೇತ ದೂಳನೆಂಬಕಾಳು
ದೈವಕ್ಕೆರಗಿ ನಾನು ಶಿವಭಕ್ತನೆನಿಸಿಕೊಂಬ ಚಂಡಿ
ನಾಯಿಗಳ ಕಂಡು ಎನ್ನ ಮನ ಹೇಸಿತ್ತು ಕಾಣಕಲಿದೇವರ ದೇವ!

(ಮಡಿವಾಳ ಮಾಚಿದೇವ (ವ.ಸಾ.ಸಂ.(ಹಳಕಟ್ಟಿ) ಪು - ೩೫೧. ವ- ೧೪೭೩)

೨. ಮೈಲಾರ, ಬೀರ, ಭೈರವ ಧೂಳಕೇತನೆಂಬ ಕಂದೈವಕ್ಕೆರಗಿ
ಭಕ್ತರೆನಿಸಿಕೊಂಬ ಚಂಡಿನಾಯಿಗಳ ಕಂಡು
ಮನ ಹೇಸಿತ್ತೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

(ಅಂಬಿಗರ ಚೌಡಯ್ಯನ ವಚನಗಳು : ಸಂ.ಬ, ಸಿದ್ಧಾಶ್ರಮ ಡಾ॥ವಿದ್ಯಾಶಂಕರ ಪು - ೯, ವಚನ - ೧೯)

೩. ಭೈರವನನಾರಾದಿಸಿ ಬಾಹಿರರಾದರಯ್ಯಾ
ಮೈಲಾರನನಾರಾಧಿಸಿ ಕರುಳ ಬೆರಳ ಕಡಿಸಿಕೊಂಡು
ನಾಯಾಗಿ ಬೊಗಳುತಿಪ್ಪರಯ್ಯಾ (ಚ.ಬ.ವ.ಸಂ. ಆತ.ಸಿ. ಹಿರೇಮಠ. ಪು : ೧೯೦, ವಚನ : ೪೨೯)

೪. ಮೈಲಾರನೇ ದೇವರೆಂದಾರಾಧಿಸಿದಾತನು ಕೊರಳಲ್ಲಿ ಕವಡೆಯ ಕಟ್ಟಿ
ನಾಯಾಗಿ ಬೊಗಳತಿರ್ಪನು
ಭೈರವನೇ ದೇವರಾಂದಾರಾಧಿಸಿದಾತನು ಕೊರಳಲ್ಲಿ ಕವಡೆಯ ಕಟ್ಟಿ
ಕರುಳ ಬೆರಳ ಕಡಿದಿಕ್ಕಿ ಬಾಯಿರನಾದನು
ಮಾಯಿರಾಣಿಯೇ ದೈವವೆಂದು ಆರಾಧಿಸಿದಾತನು ಕೊರಳಿಗೆ
ಲಜ್ಜೆಯ ನೀಡಿದ ಈ ಬಿನುಗು ದೈವಂಗಳ ಭಕ್ತಿ
ಒಣಗು ನಾಯಿ ಒಣಗಿದೆಲುವ ಕಚ್ಚಿಕೊಂಡು ಕಂಡ ಕಂಡಗೆ
ಹರಿದಂತಾಯ್ತು.

( ಉರಿಲಿಂಗ ಪದ್ದಿಯ - ವಚನಗಳು : ಸಂ, ಮಲ್ಲೆದೇವರು ಪು - ೧೯೨, ವಚನ : ೨೫೮)

ಇಂತಹ ಅಸಂಖ್ಯಾತ ವಚನಗಳಲ್ಲಿ ಭೈರವನನ್ನು ತುಂಬಾ ಕೀಳಾಗಿ ಕಂಡಿರುವ ಕಟುವಾಗಿ ಟೀಕಿಸಿರುವ ಅಂಶಗಳನ್ನು ಕಾಣಬಹುದಾಗಿದೆ. ಹಾಗೆ ನೋಡಿದರೆ ಒಬ್ಬೊಬ್ಬ ವಚನಕಾರರು ಒಬ್ಬೊಬ್ಬ ದೇವರನ್ನು ಅಂಕಿತವನ್ನಾಗಿಟ್ಟುಕೊಂಡು ಆ ದೇವರೇ ಪರಮ ಶ್ರೇಷ್ಠ ಉಳಿದ ದೇವರುಗಳು ಕನಿಷ್ಠ ಎನ್ನುವ ವಚನಕಾರರ ನಿಲುವು ಪಕ್ಷಪಾತದಿಂದ ಕೂಡಿದ್ದಾಗಿದೆ. 'ದೇವನೊಬ್ಬ ನಾಮ ಹಲವು' ಎನ್ನುವ ಜಾಯಮಾನಕ್ಕೆ ಬದ್ಧರಾದ ವಚನಕಾರರು ಭೈರವನನ್ನು ತೆಗೆಳಿದ್ದೇಕೆ? ಎನ್ನುವ ಪ್ರಶ್ನೆ ಎದುರಾಗುತ್ತದೆ. ಹಾಗೆ ನೋಡಿದರೆ ಭೈರವ ' ಉಗ್ರಸ್ವರೂಪಿ' ಯಾಗಿರುವುದರಿಂದ ತೆಗಳಿರಬಹುದೆ? ಎನ್ನುವ ಅಂಶವನ್ನು ಮನಗಾಣಬಹುದು. ಭೈರವನನ್ನು ' ಉಗ್ರ' ಎನ್ನುವುದಾದರೆ ಜನಸಮುದಾಯವನ್ನು ಹಿಂಸಿಸುತ್ತಿದ್ದ 'ರಸಸಿದ್ದ' ನಂತಹ ದೈತ್ಯರಾಕ್ಷಸನನ್ನು ಸಂಹರಿಸಿದ್ದು ತಪ್ಪೇ? ಎಂದು ಪ್ರಶ್ನೆಹಾಕಿ ಕೊಳ್ಳಬೇಕಾಗುತ್ತದೆ. ನನಗೆ ತಿಳಿಯುವ ಪ್ರಕಾರ 'ಭೈರವನ ಮೂರ್ತಿ' ತುಂಬಾ ಉಗ್ರವಾಗಿದ್ದು ಅಂಗ್ಸನ ತಲೆಯನ್ನು ಹಿಡಿದುಕೊಂಡಿದ್ದಾನೆ. ಆ ಅಂಗ್ಸನ ತಲೆಗೆ ನಾಯಿಗಳು ಮುತ್ತಿಗೆ ಹಾಕಿವೆ. ಈ ಮೂರ್ತಿಯ ಚಿತ್ರಣ ತುಂಬಾ ಹಿಂಸಾತ್ಮಕವಾಗಿ ಕಂಡಿರಬೇಕು. ಹಾಗಾಗಿ ಹಿಂಸೆಯನ್ನು ಪ್ರತಿನಿಧಿಸುವ ದೈವ ದೈವವಲ್ಲ ಎನ್ನುವ ನೆಲೆಯಲ್ಲಿ ವಚನಕಾರರು ಭೈರವನನ್ನು ತೆಗಳಿರಬೇಕೆಂಬ ನಿಲುವಿಗೆ ಬರಬಹುದು. ಇನ್ನು ಭೈರವನನ್ನು ಆರಾಧಿಸುವವರು ಕೆಳಜಾತಿಯ ಜನಾಂಗವಾದುದರಿಂದ ಒಂದು ಕಾಲಕ್ಕೆ ಮೇಲ್ಜಾತಿಯವರು ಭೈರವನ ಮೂರ್ತಿಗಳನ್ನು ಹೊಡೆದಾಕಿರಬೇಕು. ಈ ಸಾಂಸ್ಕೃತಿಕ ಸಂಘರ್ಷದಿಂದಾಗಿ ಈಗಲೂ ಬಹುತೇಕ ಕಡೆಗಳಲ್ಲಿ ಭೈರವನ ಮೂರ್ತಿಗಳು ಶಿಥಿಲವಾಗಿರುವುದನ್ನು ನೋಡಬಹುದು. ಹೀಗಾಗಿ ಎಲ್ಲಾ ಕಡೆಗೂ ವ್ಯವಸ್ಥಿತವಾದ ಗುಡಿಯಿಲ್ಲದ ಶಿಥಿಲವಾಗಿರುವ ಭೈರವನ ಮೂರ್ತಿಗಳನ್ನು ಕಂಡ ವಚನಕಾರರು ಸಹಜವಾಗಿ ಟೀಕಿಸಿರುವ ಅಂಶವನ್ನು ಮನಗಾಣಬಹುದು.

೭. ಸುಂಕೇ ಮಲಿ ಭೈರವನ ಕುರಿತ ಸಾಹಿತ್ಯ

೭.೧. ಶಿಷ್ಟ ಸಾಹಿತ್ಯ

೭. ೨. ಜನಪದ ಸಾಹಿತ್ಯ

೭.೨.೧. - ಕಥೆ

೭.೨.೨. - ಗೀತೆಗಳು

೭.೨.೩. - ಐತಿಹ್ಯಗಳು

## ೭.೧. : ಶಿಷ್ಟ ಸಾಹಿತ್ಯ

ಶಿಷ್ಟ ಸಾಹಿತ್ಯವೆಂದರೆ ಸಂಕ್ಷಿಪ್ತವಾಗಿ ಹೇಳುವುದಾದರೆ ಲಿಖಿತವಾಗಿ ದೊರೆಯುವ ಆಕರ. ಅದು ಪ್ರಕಟಿತವಾಗಿರುಬಹುದು, ಅಪ್ರಕಟಿತವಾಗಿರವಹುದು. ಒಂದು ಚರಿತ್ರೆಯನ್ನು ಬರಹದ ಮೂಲಕ ದಾಖಲಿಸಿ ಸಂಗ್ರಹಿಸಿಡುವುದಾಗಿದೆ. ಅವುಗಳೆಂದರೆ ಪ್ರಕಟಿತ ಪುಸ್ತಕಗಳು, ಅಪ್ರಕಟಿತ ಹಸ್ತಪ್ರತಿಗಳು, ತಾಮ್ರಪತ್ರಗಳು ಮತ್ತು ಶಾಸನ ಬರಹಗಳಾಗಿವೆ. ಇಂತಹ ಶಿಷ್ಟ ಸಾಹಿತ್ಯಿವು ನಾವು ಕೈಗೊಳ್ಳುವ ಅಧ್ಯಯನಕ್ಕೆ ಮಾರ್ಗದರ್ಶನವನ್ನು ನಾವು ಅಧ್ಯಯನ ಮಾಡಬಹುದಾದ ವಿವಿಧ ಆಯಾಮಗಳನ್ನು ತೋರಿಸಿ ಕೊಡುತ್ತವೆ.

ನುಂಕೇಮಲೆ ಭೈರಾವರಾಧನೆ ಕುರಿತು ಈವರೆಗೂ ಗಂಭೀರವಾದ ಅಧ್ಯಯನಗಳು ನಡೆಯದೇ ಇರುವುದ ರಿಂದ ಸಿಗುವ ಅಲ್ಪ ಲಿಖಿತಾಧಾರಗಳನ್ನೇ ಇಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಹಾಗೆ ನೋಡಿದರೆ ನಮಗೆ ಸಿಗುವ ಮೂಲ ಆಕಾರವೆಂದರೆ ಮೊಳಕಾಲ್ಮೂರು ನುಂಕಿಮಲೆಯ ಪಾರಮಾರ್ಥ ೬೦ ರ ದಶಕದಲ್ಲಿ ಅಂದರೆ ೧೯೬೦ ರಲ್ಲಿಯೇ ಮೊಳಕಾಲ್ಮೂರಿನ ತತ್ವಜ್ಞಾನ ಸಮಾಜದ ಪ್ರಸಿಡೆಂಟರೂ ಕರ್ನಾಟಕ ವಚನ ರಚನ ಪ್ರವೀಣರಾದ, ಯಂ.ರಂಗಪ್ಪನವರು ಕ್ಷೇತ್ರ ಕಾರ್ಯದ ಆಧಾರ ಮತ್ತು ಸ್ವರಚಿತ ವಚನಗಳ ಮೂಲಕ ಈ ಕೃತಿಯನ್ನು ರಚಿಸಿದ್ದಾರೆ.

ಈ ಗ್ರಂಥವು ಮೂರು ಭಾಗವಾಗಿ ವಿಂಗಡಿಸಲ್ಪಟ್ಟಿವೆ. ೧ನೇಭಾಗದಲ್ಲಿ ಮೊದಲು ಲೇಖಕರು ನಮ್ಮ ನಾಡಿನ ನಾಗರೀಕತೆಯ ಪರಿಚಯವನ್ನು ಮಾಡಿ ಅನಂತರ ತತ್ವಜ್ಞಾನ ಸಮಾಜದ ತತ್ವವಿವೇಚನಾ ಮಾರ್ಗವನ್ನನುಸರಿಸಿ ತತ್ವಸ್ವರೂಪವನ್ನು ವಿವರಿಸಿರುವರು. ಮುಂದಿನೊಂದು ಭಾಗಗಳಲ್ಲಿ ನುಂಕೇ ಮಲೆಯಲ್ಲಿರುವ ದೇವತೆಗಳನ್ನು ಪ್ರಕೃತಿ ಸನ್ನಿವೇಶಗಳನ್ನು ಅಲ್ಲಿನ ಪದ್ಧತಿಗಳನ್ನು ವಿವರಿಸಿ ಅವುಗಳಿಗೆ ತಾತ್ಪರ್ಯವನ್ನು ಜೋಡಿಸಿರುವುದು.

ಈ ಗಂಥ ಸಂಭಾಷಣಾ ರೂಪದಲ್ಲಿ ರಚನೆಯಾಗಿದೆ. ಇಲ್ಲಿ ಪರಿ ಎಲ್ಲವನ್ನು ಪ್ರಶ್ನೆಮಾಡುತ್ತಾ ಹೋಗುತ್ತಾನೆ. ಜನಾ ಆ ಎಲ್ಲಾ ಪ್ರಶ್ನೆಗಳಿಗೆ ಆಧಾರ ಸಹಿತವಾಗಿ ಉತ್ತರಿಸುತ್ತಾ ಮುನ್ನಡೆಯುತ್ತಾನೆ. ಹೀಗೆ ಈ ಪಾರಮಾರ್ಥ ಪ್ರಶ್ನೋತ್ತರ ರೂಪದಲ್ಲಿ ಸಾಗುತ್ತಾ ಸಂಶೋಧನಾತ್ಮಕ ಆಯಾಮವನ್ನು ಪಡೆದುಕೊಳ್ಳುತ್ತಾರೆ. ಈ ಲೇಖಕರು ಮೂಲತಃ ತತ್ವಜ್ಞಾನ ಸಮಾಜದ ಹಿನ್ನೆಲೆಯವರಾಗಿದ್ದರಿಂದ ತತ್ವಜ್ಞಾನದ ಪ್ರಭಾವ ಎದ್ದು ಕಾಣುತ್ತದೆ. ಹಾಗಾಗಿ ಜನಪದರ ಆಶಯವಾಗಲಿ, ಜನಪದರ ನಂಬಿಕೆ ಆಚರಣೆಗಳ ಬಗೆಗಾಗಿ ಈ ಗ್ರಂಥ ಯಾವುದೇ ಕುರುಹುಗಳನ್ನು ಕೊಡುವುದಿಲ್ಲ ಆದರೂ ಈ ಗ್ರಂಥ ನುಂಕೇಮಲೆ ಚರಿತ್ರೆಯ ಬಗ್ಗೆ ಅನೇಕ ಮಹತ್ವದ ಹೊಳಹುಗಳನ್ನು ಕೊಡುತ್ತದೆ. ಹಾಗಾಗಿ ಪ್ರಸ್ತುತ ಕೃತಿ ನನ್ನ ಈ ಅಧ್ಯಯನಕ್ಕೆ ಮೂಲ ಆಕರವಾಗಿ ತುಂಬಾ ಸಹಾಕಾರಿಯಾಗಿದೆ.

ನುಂಕೇಮಲೆ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಕೆಲವು ಪತ್ರಿಕೆಗಳ ಬಿಡಿ ಲೇಖನಗಳನ್ನು ನೋಡಬಹುದು.

(ಉದಾ: ೬೬ -೨೦೦೧ ಪ್ರಜಾವಣಿ ಸಾಪ್ತಾಹಿಕ ಪುರವಣಿ, ಮೊಳಕಾಲ್ಮೂರು ನುಂಕೇಮಲೆ ಬಹುಸಂಸ್ಕೃತಿಯ ನೆಲೆ. ಸೂರಮ್ಮನ ಹಳ್ಳಿ, ಉಮೇಶ್ ಲೇಖನ) ಹಾಗೆಯೇ ಮೈಸೂರು ಗೆಜೆಟಿಯರ್ ವ್ಯಾಲ್ಯೂಮ್ ೨ ಪುಟ ೫೩೫ ರಲ್ಲಿ ಮೊಳಕಾಲ್ಮೂರಿನ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಕೆಲ ಅಂಶಗಳನ್ನು ನೋಡಬಹುದಾಗಿದೆ. ಚರಿತ್ರೆ ಅಧ್ಯಯನದಲ್ಲಿ ಗೆಜೆಟಿಯರ್‌ನ ಅಂಶಗಳನ್ನು ಕೂಲಂಕುಶವಾಗಿ ಚರ್ಚಿಸಿದ್ದೇವೆ.

ನಮಗೆ ದೊರೆಯಬಹುದಾದ ಅತೀ ಪ್ರಾಚೀನ ಲಿಖಿತಾಧಾರಗಳೆಂದರೆ ಮಲ್ಲಿಕಾರ್ಜುನ ದೇವಸ್ಥಾನದ ಒಂಬದಿಯ ಬಂಡೆಯ ಮೇಲೆ ಕೊರೆಸಿದ ೧೦ನೇ ಶತಮಾನದ ಕದಂಬರ ಅಜವರ್ಮರಾಯನ ೨ ಶಾಸನಗಳು. ಈ ಶಾಸನಗಳು ನುಂಕೇಮಲೆ ಕ್ಷೇತ್ರನೆಲೆಗೊಂಡ ಬಗೆಗೆ, ಮತ್ತು ಕದಂಬರ ಬಗೆಗೆ ಮಾಹಿತಿಯನ್ನು ಒದಗಿಸುತ್ತವೆ. ಇದೇ ಅಧ್ಯಾಯದಲ್ಲಿ 'ಶಾಸನ' ವಿಭಾಗದಲ್ಲಿ ಈ ಶಾಸನ ಒಳಗೊಂಡಿರುವ ಅಂಶಗಳು ಮತ್ತು ಚಾರಿತ್ರಿಕ ಸತ್ಯಗಳ ಬಗೆಗೆ ಚರ್ಚಿಸಿದ್ದೇವೆ. ಇತ್ತೀಚಿಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪುರಾತತ್ವ ವಿಭಾಗದಿಂದ ಸಿ. ಎಸ್. ವಾಸುದೇವನ್ ಇವರ ಮಾರ್ಗದರ್ಶನದಲ್ಲಿ ಯು.ಜಯಣ್ಣ ಎಂಬುವರು 'ಮೊಳಕಾಲ್ಮೂರು ತಾಲೂಕಿನ ಪುರಾತತ್ವ ಪರಿಸರ ಈ ವಿಷಯವಾಗಿ ಪುರಾತತ್ವ ನೆಲೆಯಲ್ಲಿ ನುಂಕೆಮಲೆ ಪರಿಸರದ ಶಾಸನ, ದೇವಸ್ಥಾನ, ಬೆಟ್ಟಗಳ ಬಗೆಗೆ ವಿಶ್ಲೇಷಿಸಿದ್ದಾರೆ. ಈ ಅಪ್ರಕಟಿತ ಮಹಾ ಪ್ರಬಂಧವು ಸಹಾ ನುಂಕೇ ಮಲೆ ಪರಿಸರದ ಬಗೆಗೆ ಲಿಖಿತಾಧಾರವಾಗಿ ಶಿಷ್ಟಸಾಹಿತ್ಯದಲ್ಲಿ ನೋಡಬಹುದು.

ಈ ಅಪ್ರಕಟಿತ ಪ್ರಬಂಧದಲ್ಲಿ ನನ್ನ ಅಧ್ಯಯನಕ್ಕೆ ಪೂರಕವಾಗಿ ಅಂಶಗಳನ್ನು ಬಳಸಿಕೊಂಡಿದ್ದೇನೆ. ಉಳಿದಂತೆ ಕ್ಯಾಸೆಟ್ ಸಾಹಿತ್ಯವನ್ನು ನೋಡಬಹುದು. ಇವು ಭೈರವನ ಚರಿತ್ರೆಯನ್ನು ಹೇಳುತ್ತಾವಾದರೂ ಜನಪ್ರಿಯತೆಯ ಒನ್ನೆಲೆಯಲ್ಲಿ ಆಧುನಿಕತೆಯ ಪ್ರಭಾವವನ್ನು ಗುರುತಿಸಬಹುದು. ಹಾಗಾಗಿ ಕ್ಯಾಸೆಟ್ ಸಾಹಿತ್ಯದ ಅಂಶಗಳನ್ನು ನನ್ನ ಅಧ್ಯಯನದಲ್ಲಿ ಬಳಸಿಕೊಂಡಿಲ್ಲ. ಇನ್ನು ನುಕೇಮಲೆ ಭೈರವನ ಕಥೆಯನ್ನಾಧರಿಸಿ ಡಿ.ಬಿ.ಅಜ್ಜುಮುನಿ ಶಿಕ್ಷಕರು, ಯರ್ರೇನಹಳ್ಳಿ ಇವರು ದೊಡ್ಡಾಟದ ನಾಟಕ ಸಾಹಿತ್ಯವನ್ನು ರಚಿಸಿದ್ದಾರೆ.

ಈ ನಾಟಕ ಸಂಭಾಷಣೆಯ ಮೂಲಕ ಗಮನ ಸೆಳೆಯುತ್ತದೆ. ಹಾಗೆಯೇ ಕಥೆಯ ಹೇಳಿದ ಇತ್ತೀಚಿನ ಹೊಸ ಅಂಶಗಳನ್ನು ಈ ದೊಡ್ಡಾಟದಿಂದ ಗೋಚರವಾಗುತ್ತವೆ. ಹಾಗಾಗಿ ಈ ದೊಡ್ಡಾಟದ ಅಸ್ತಿಪ್ರತಿಯನ್ನು ಸಹ ಅಧ್ಯಯನದ ದೃಷ್ಟಿಯಿಂದ ಪರಿಶೀಲಿಸಿದ್ದೇನೆ.

ಹೀಗೆ ನುಂಕೇಮಲೆ ಭೈರವಾರಾಧನೆಯ ಬಗೆಗೆ ದೊರೆಯಬಹುದಾದ ಶಿಷ್ಟಸಾಹಿತ್ಯ ಮಾಹಿತಿ ಪ್ರಧಾನವಾಗಿ ಅಧ್ಯಯನಕ್ಕೆ ಹೆಚ್ಚು ಪೂರಕವಾಗಿದೆ. ಹಾಗೆಯೇ ಜನಪದ ಸಾಹಿತ್ಯರೂಪ ಶಿಷ್ಟ ಸಾಹಿತ್ಯಕ್ಕಿಂತಲಲಿ ವಿಶಿಷ್ಟ ವಿಭಿನ್ನ ಅಂಶಗಳನ್ನು ಬೆಳಕಿಗೆ ತರುವುದನ್ನು ನೋಡಬಹುದಾಗಿದೆ. ಹಾಗಾಗಿ ಇಲ್ಲಿ ಶಿಷ್ಟ ಸಾಹಿತ್ಯ ಮತ್ತು ಜನಪದ ಸಾಹಿತ್ಯವನ್ನು ಮುಖಾಮುಖಿ ಮಾಡುವ ಮೂಲಕ ನನ್ನದೇ ಆದ ಒಂದು ನಿಲುವಿಗೆ ಬರಲು ಅಧ್ಯಯನ ಸಹಕಾರಿಯಾಗಿದೆ.

## ೭.೨. ಜನಪದ ಸಾಹಿತ್ಯ

## ೭.೨.೧. ಕಥೆ

ಕಥೆಯು ಮೌಖಿಕವಾಗಿ ಸಂಹನಗೊಂಡು ಪರಂಪರಾಗತವಾಗಿ ಹರಿದು ಬಂದಿರುವುದನ್ನು ನಾವು ಜನಪದ ಕಥೆ ಎಂದು ಕರೆಯುತ್ತೇವೆ. ಇದನ್ನು ಆಂಗ್ಲಭಾಪೆಯಲ್ಲಿ Folktale ಎಂದು ಕರೆಯುತ್ತಾರೆ. ಜನಪದ ಕಥೆಯು ಬಾಯಿಂದ ಬಾಯಿಗೆ ಹರಿದು ಬಂದಿರುವುದು. ಈ ಕಥೆಗಳ ಉಗಮ, ವಿಕಾಸ, ಮತ್ತು ಪ್ರಸಾರಗಳನ್ನು ಅಧ್ಯಯನ ಮಾಡಿದವರಿಗೆ ಇದು ಅಸತ್ಯವೆನಿಸುವುದು. ಆದರೆ ಮಾನವ ಅವನು ಸಮಾಜ, ಸಂಸ್ಕೃತಿ, ನಾಗರೀಕತೆಗಳ ಬಗ್ಗೆ ಅಧಿಕ ಪುರಾವೆಗಳನ್ನು ಒದಗಿಸಬಲ್ಲ ಇದು ಕೇವಲ ಸಾಹಿತ್ಯ ಪ್ರಕಾರವಾಗಿರದೆ ಪ್ರಮಾಣಿಕ ವಿಜ್ಞಾನವೂ ಆಗಿದೆ. ಜನಪದ ಕಥೆಯು ಸಾಂಸ್ಕೃತಿಕ ಇತಿಹಾಸದ ಬಹುಮುಖ್ಯವಾದ ಭಾಗ ಗ್ರಾಮ್ಯತೆ ಅದರ ಸೊಬಗು ನಾಟಕೀಯತೆ ಅದರ ಉಸಿರು ಪರಮುಖ ಘಟನೆಗಳು ಮನ ಶಾಸ್ತ್ರೀಯ ಹಿನ್ನೆಲೆಯಲ್ಲಿ ರೂಪಿತವಾಗಿ ಆಗಾಗ್ಗೆ ಭಾವನಾತ್ಮಕವಾಗುವ ಸಂಭವವೂ ಇರುತ್ತದೆ. ಜನತೆಯ ಆಚಾರ, ವಿಚಾರ, ನಂಬಿಕೆ, ನಡುವಳಿಕೆಗಳ ವಿವೇಕ ಬುದ್ಧಿಮತ್ತೆಗಳ ಪ್ರತಿನಿಧಿಗಳು ಈ ಕಥೆಗಳಾಗಿವೆ. ಕಥೆಗಳಲ್ಲಿ ಚಾರಿತ್ರಿಕ, ಪೌರಾಣಿಕ ಅಂಶಗಳು ಕಂಡುಬರುತ್ತವೆ. ಇವುಗಳು ಸೌಂದರ್ಯದಿಂದ ಕೂಡಿದ್ದು ಮನರಂಜನೆ ನೀಡುವ ಪ್ರಮುಖ ಪ್ರಕಾರವಾಗಿದೆ. ಒಂದು ರೀತಿಯ ಮಾನಸಿಕ ಸುಖವಿಶ್ರಾಂತಿ, ಅನಕ್ಷರಸ್ತ ಸ್ತ್ರೀಪುರಪರಿಗೆ ದುಃಖೋಪಶಮನಕಾಲ ಮುಂದುವರೆಯುತ್ತವೆ. ಇವು ದೈನಂದಿನ ಜೀವನದ ಮೇಲೆ ಹೇರಳವಾಗಿ ಬೆಳಕು ಚೆಲ್ಲುವಂತಹುಗಳಾಗಿವೆ. ಇವು ಹೊಸ ಸಂಸ್ಕೃತಿಯ ನಿರ್ಮಾಣಕ್ಕೆ ಯುಕ್ತವಾದ ಹಿನ್ನೆಲೆಯನ್ನು ಒದಗಿಸುತ್ತವೆ. ಹಾಗೂ ಮಾನವನ ಸಾಂಸ್ಕೃತಿಕ ವಿಕಾಸದ ವಿವಿಧ ಘಟ್ಟಗಳನ್ನು ಅಭ್ಯಾಸ ಮಾಡಲು ಕಥೆಗಳು ವಿಫುಲ ಸಾಮಗ್ರಿಯನ್ನು ಒದಗಿಸುತ್ತವೆ.

ಪ್ರಪಂಚದ ಎಲ್ಲಾ ಜನಪದ ಕಥೆಗಳಲ್ಲಿ ಕಂಡುಬರುವ ಪ್ರಮುಖ ಲಕ್ಷಣವೆಂದರೆ ಅವುಗಳ ಸಮರೂಪಕತೆ ವರ್ಣನೆಗಳು ಸಂಕ್ಷಿಪ್ತ ಪುನರಾವರ್ತನೆ ಸಾಮಾನ್ಯ ಜನಪದ ಕಥೆಗಳಲ್ಲಿ ಸರಳ ಕಥೆಗಳೂ ಸಂಕೀರ್ಣ ಕಥೆಗಳೆಂದು ವರ್ಗೀಕರಿಸಿ ಅವುಗಳಲ್ಲಿ ಆಶಯ ಮತ್ತು ಮಾದರಿ ಬಹು ಮುಖ್ಯ ಪಾತ್ರ ವಹಿಸುತ್ತವೆ. ಇವುಗಳಿಗೆ ಗೌರವ ಭಾವನೆಗಳಿರುವುದರಿಂದ ತಲೆಮಾರಿನಿಂದ ತಲೆಮಾರಿಗೆ ದಾಟಿಬರಲು ಸಾಧ್ಯವಾಯ್ತು. ಕಾಲದಿಂದ ಕಾಲಕ್ಕೆ,ಬಾಯಿಂದ ಬಾಯಿಗೆ, ದೇಶದಿಂದ ದೇಶಕ್ಕೆ ಹರಿದು ಬರುವಾಗ ಅರಿತೊ ಅರಿಯದೆಯೋ ಬದಲಾವಣೆಹೊಂದುವುದು ಸಾಮಾನ್ಯ ಸಾಮ್ಹಾಯವಾಗಿ ಪಾತ್ರೆಗಳ ಸಂಖ್ಯೆ ಕಡಿಮೆಯಿರುತ್ತದೆ. ಪ್ರತಿನಾಯಕರ ಪಾತ್ರ ನಾಯಕನ ವಿರೋಧಿಯಾಗಿರುತ್ತದೆ. ಮಾಂತ್ರಿಕ ವಸ್ತುಗಳ, ಪ್ರಾಣಿಗಳ ಮಹತ್ವ ಸಾಮಾನ್ಯ, ಸಾಮ್ಹಾಯವಾಗಿ ಸೂತ್ರಬದ್ಧ ಆರಂಭ ಮತ್ತು ಸೂತ್ರ ಬದ್ಧ ಮುಕ್ತಾಯವಿರುತ್ತದೆ. ಒಂದಾನೊಂದು ಕಾಲದಲ್ಲಿ ಹೀಗೆ ಆರಂಭವಾಗುವುದು ಸಾಮಾನ್ಯ ಕಥೆಗಳಲ್ಲಿ ಶಿಷ್ಟರಿಗೆ ಜಯವೂ, ದುಷ್ಠರಿಗೆ ಸೋಲು, ರಾಕ್ಷಸಿಯನ್ನು ವರ್ಣಿಸುವಾಗ ಬೆಟ್ಟದಂತೆ ಅವಳತಲೆ, ಸೊಗದಂತೆ ಅವಳ ಕೈ, ದೊಡ್ಡ ಗವಿಯಂತೆ ಅವಳ ಬಾಯಿ ಮುಂತಾಗಿ ವರ್ಣಿಸಲಾಗುವುದು.

ಪೌರಾಣಿಕ ಹಿನ್ನೆಲೆಯಾಗಿ ಕೆಲವು ಜನಪದ ಕಥೆಗಳು ಹುಟ್ಟಿಕೊಳ್ಳುತ್ತವೆ. ಅಂತಹ ಒಂದು ಕಥೆಯನ್ನು ಮೊಳಕಾಲ್ಮುರು ಪರಿಸರದ ಜನಪದರು ಮಾತ್ರವಲ್ಲದೆ ಮತ್ತು ಕೆಲವು ಭಾಗಗಳಲ್ಲಿಯೂ ಸಹ ನುಂಕೇಮಲೆ ಭೈರವನ ಕಥೆಯನ್ನು ಹೇಳುತ್ತಾರೆ.

## ಕಥೆ

ಒಂದಾನೊಂದು ಕಾಲದಲ್ಲಿ ಕೈಲಾಸವಾಸಿಯಾದ ಪರಮೇಶ್ವರನ ಒಡ್ಡೋಲಗದಲ್ಲಿ ಸಭೆಯು ನೆರದಿತ್ತು. ಇದರಲ್ಲಿ ದೇವಾನುದೇವತೆಗಳು, ಗಾಂಧರ್ವರಕನ್ಯೆರು, ಭಾಗವಹಿಸಿದ್ದರು. ಇಂತಹ ಸಭಾ ಮಂದಿರದಲ್ಲಿ ಕೆಲವು ಗಾಂದರ್ವ ಕನ್ಯೆಯರು ಪರಮೇಶ್ವರ ಎದುರಿನಲ್ಲಿ ಬಹು ಕೆಟ್ಟದಾಗಿ ವರ್ತಿಸಿದರು. ಇದರಿಂದ ಕುಪಿತನಾದ ಶಿವನು ನೀವು ಭೂಲೋಕದಲ್ಲಿ ರಾಕ್ಷಸರಾಗಿ ಹುಟ್ಟುವಂತಾಗಿರಿ ಎಂದು ಶಾಪ ಕೊಟ್ಟ. ಆಗವರು ಸ್ವಾಮಿ ನಮ್ಮದು ತಪ್ಪಾಯಿತು ಎಂದು ಕಾಲಿಗೆ ಬಿದ್ದು ನಮಗೆ ಶಾಪ ವಿಮೋಚನೆಯ ದಾರಿ ನೀಡಬೇಕೆಂದು ಕೇಳಿಕೊಂಡಾಗ ಅವರಿಗೆ ಈ ರೀತಿಯಾಗಿ ಹೇಳಿದನು ಮುಂದೆ ನನ್ನ ಮಕ್ಕಳಾದ ಕಾಲಭೈರವ ಹಾಗೂ ಕರ್ಪೂರದಮ್ಮ ಇವರು ಬಂದು ನಿಮ್ಮನ್ನು ಸಂಹರಿಸಿ ಮುಕ್ತಿ ಕಾಣಿಸುತ್ತಾರೆ. ಆಗ ನೀವುಗಳು ಗಾಂದರ್ವ ಕನ್ಯೆಯರಾಗಿ ಮರುಜನ್ಮ ಪಡೆಯುವಿರಿ ಎಂದು ಹೇಳಿದನು.

ಹೀಗೆ ಪರಶಿವನ ಶಾಪವೊತ್ತ ಗಾಂಧರ್ವ ಕನ್ಯೆಯರು ಭೋಲೋಕದಲ್ಲಿ ರಕ್ಕಸರಾಗಿ ಹುಟ್ಟಿದರು. ನುಂಕೇಮಲೆಯ ಬೆಟ್ಟದಲ್ಲಿ ರಸಸಿದ್ದ, ಅಂಗ್ಸ, ನೀಲವರ್ಣ, ಇವರಿಗೆ ದಾಸಿಯರಾಗಿ ನುಂಕವ್ವ ಮಲಿಯವ್ವ ಮತ್ತು ರಸಸಿದ್ದನ ವಾಹನವಾಗಿ ಕೋಣ ಇವರ ಸೇವಕರಾಗಿ ಪಲುಮರಾಜರು ಎಂಬಂತಹ ಹೆಸರುಗಳಿಂದ ಹುಟ್ಟಿ ವಿಷವನ್ನೇ ಆಹಾರವಾಗಿ ಸೇವಿಸುತ್ತಾ ಕಾಲಕಳೆಯುತ್ತಿದ್ದರು. ಮತ್ತೆ ಕೆಲವು ಗಾಂಧರ್ವ ಕನ್ಯೆಯರು ದ್ರೋಣಾದ್ರಿಮಲೆಗೆ ಅಧಿಪತಿಯಾಗಿ 'ಚಂಡಿ' ಎಂಬ ರಕ್ಕಸಿಯೂ ಇವಳಿಗೆ ಕೆಲವು ದಾಸಿಯರಾಗಿ ಹುಟ್ಟಿದರು. ಮತ್ತೊಬ್ಬ ಗಾಂಧರ್ವಕನ್ಯೆ ಬಲ್ಲಾಳರಾಯನ ವಾಹನ ಟಗರಾಗಿಯೂ ಹುಟ್ಟಿತು. ಹೀಗೆ ಭೂಲೋಕದಲ್ಲಿ ರಾಕ್ಷಸರಾಗಿ ಹುಟ್ಟಿದ ಕೆಲವರು ಪ್ರಾಣಿ, ಪಕ್ಷಿಗಳಿಗೆ ಅದರಲ್ಲೂ ನರಮಾನವರಿಗೆ ತುಂಬಾ ತೊಂದರೆಯನ್ನು ಕೊಡುತ್ತಿದ್ದರು. ಬರಗಾಲ ಬಂದು ಸೊರಗಿ ಹೋಗಿದ್ದ ಜನಗಳಿಗೆ ರಕ್ಕಸರಹಾವಳಿ ಮತ್ತೊಂದು ಕಡೆ.

ಹೀಗಿರುವಾಗ ಪ್ರಜೆಗಳು ಪರಮಾತ್ಮನನ್ನು ಧ್ಯಾನಿಸುತ್ತಾ ಜಪ ತಪ ಮಾಡತೊಡಗಿದರು. ಇದು ಪರಮೇಶ್ವರನ ಕಿವಿಗೆ ಬಿದ್ದು ತನ್ನ ಬೆವರಿನಿಂದ ಕಾಲಭೈರವನನ್ನೂ, ಕರ್ಪೂರದಮ್ಮನನ್ನೂ ಭೂಲೋಕದಲ್ಲಿ ಕೆಲವು ಪವಾಡಗಳನ್ನು ಕೆಲವು ರಕ್ಕಸರ ಹಟ್ಟಹಾಸವನ್ನು ಮೆಟ್ಟಿಹಾಕಬೇಕೆಂದೂ, ನಿಮಗೆ ಅಂತಹ ಕಷ್ಟವೇನಾದರೂ ಬಂದರೆ ತನ್ನನ್ನು ಸ್ಮರಿಸಿದರೆ ತಾನೆಂದಿಗೂ ಸಹಾಯಮಾಡಲು ಸಿದ್ದನೆಂದೂ, ಭೂಲೋಕದಲ್ಲಿ ನಿಮ್ಮ ಕಾರ್ಯಗಳೆಲ್ಲಾ ಕೈಗೂಡಿದ ಮೇಲೆ ನಿಮ್ಮನ್ನು ಭೇಟಿಯಾಗುತ್ತೇನೆಂದು ಹೇಳಿ ಕಳಿಸಿದನು. ಇಲ್ಲಿ ವೀರಭದ್ರ ಯಾವ ರೀತಿ ಹುಟ್ಟಿದನೋ ಹಾಗೆಯೇ ಕಾಲಭೈರವ ಘೋರ ರೂಪತಾಳಿದ. ಹೀಗೆ ಅಕ್ಕ ಕರ್ಪೂರದಮ್ಮ ತಮ್ಮನಾದ ಕಾಲಭೈರವನು ಭೂಲೋಕಮಾರ್ಗವಾಗಿ ಬಂದು ಉಜ್ಜಿನಿ ಮತ್ತು ಕೊಟ್ಟೂರು ಎಂಬ ಪುಣ್ಯಕ್ಷೇತ್ರಗಳ ಬಳಿ ಇಳಿಯುತ್ತಾರೆ.

ಉಜ್ಜಿನಿಗೆ ಮೊದಲು 'ಮೋಪರಿ' ಗ್ರಾಮ ಎಂಬ ಹೆಸರಿತ್ತಂತೆ. ಇಲ್ಲಿಗೆ ಇವರು ಸಾಮಾನ್ಯ ಮಾನವರಂತೆ ಪ್ರವೇಶಿಸಿದರು. ಇಲ್ಲಿ ಊರ ಗೌಡನಿಗೆ ಒಬ್ಬನೇ ಮಗನಿದ್ದು ಗೂಳಿಯಿಂದ ಇರಿದು ಸಾಯಲ್ಪಟ್ಟಿರುತ್ತಾನೆ. ವಂಶದ ಕುಡಿಯೊಂದು ಇಲ್ಲವಾದದಕ್ಕೆ ಶೋಕಿಸುತ್ತಾ ಕಾಡಿನ ಮರಳು ಗಾಡಿನಲ್ಲಿ ಚಿತೆಗೆ ಬೆಂಕಿಯಿಡಲು ವ್ಯವಸ್ಥೆಮಾಡಿ ಸುಡಲಾರದೆ ಎರಡು ದಿನಗಳ ವರೆಗೂ ಹಾಗೆಯೇ ಪರಮಾತ್ಮನನ್ನು ಸ್ಮರಿಸುತ್ತಿರುವಾಗ ಭೈರವನು ಹೋಗಿ ಸತ್ತಿರುವ ಬಾಲಕನನ್ನು ತನ್ನ ಸ್ಪರ್ಶದಿಂದ ಬದುಕಿಸುತ್ತಾನೆ. ಅಲ್ಲಿರುವ ಜನಗಳಿಗೆಲ್ಲಾ ಆಶ್ಚರ್ಯವಾಗಿ ಸ್ವಾಮಿ ನೀವು ಸಾಮಾನ್ಯ ಮಾನವನಲ್ಲ ದೈವೀಪುರುಷನೆಂದು ಮಂದಿಯೆಲ್ಲಾ ಕಾಲಿಗೆ ಬೀಳಲು ಈ ಮರಳನ್ನು ಕುಪ್ಪೆ ಮಾಡಿ ಇದನ್ನು ಮರಳ

ಷಿದ್ದೇಶನೆಂದೂ ಪೂಜಿಸಿದರೆಂದು ಹೇಳಿದನು. ಅಂದಿನಿಂದ ಉಜ್ಜಿನಿಯಲ್ಲಿ ಮರುಳಸಿದ್ದೇಶ್ವರನ ಪೀಠ ಮಠ ಸ್ಥಾಪನೆಯಾಯಿತು. ನಂತರ ನಂಜೇರಿ ಎಂಬ ಗ್ರಾಮದಲ್ಲಿ ಮಳೆಯಿಲ್ಲದೆ ಬರಗಾಲದಿಂದ ತತ್ತರಿಸಿದ ಪ್ರಜೆಗಳು ಭಜನೆಯ ಮೂಲಕ ಶಿವನನ್ನು ಸ್ತೋತ್ರ ಮಾಡುತ್ತಿರಲು ಇಲ್ಲಿಗೆ ಬಂದ ಭೈರವ ಈ ವಿಷಯಗಳನ್ನು ಅಕ್ಕನ ಮುಂದೆ ಹೇಳಿದಾಗ ಸಂತೋಷಪಟ್ಟಳು.

ನಂತರ ಇವರ ಮುಂದಿನ ಕಾರ್ಯಗಳು ರಕ್ಕಸರ ಸಂಹಾರ ಮಾಡುವುದು. ಕಾಲಭೈರವ, ಕರ್ಪೂರದಮ್ಮ ತಮ್ಮ ರಥವನ್ನೇರಿ ದ್ರೋಣಾದ್ರಿ ಮಲೆಗೆ ಪ್ರವೇಶಮಾಡುತ್ತಾರೆ. (ಸಂಡೂರುಬಳಿ) ಇಲ್ಲಿ ಚಂಡಿ ಎಂಬ ರಕ್ಕಸಿಯು ಈ ಭಾಗಕ್ಕೆ ಅಧಿಪತಿಯಾಗಿರುತ್ತಾಳೆ. ಇವಳೊಬ್ಬ ವಿಚಿತ್ರವಾದ ರಾಕ್ಷಸಿ. ಇವಳ ಬಾಯಿ ಊರು ಅಗಲ. ಇವಳ ಮೂಗು ದೊಡ್ಡಗವಿಯಂತೆ, ಇವಳ ತಲೆ ಬೆಟ್ಟದಂತೆ ಇವಳ ತಲೆಯಲ್ಲಿ ಜಿಂಕೆ, ನರಿ, ಮೊಲ, ತೋಳಗಳು ವಾಸವಾಗಿದ್ದವಂತೆ ಅಷ್ಟು ದೊಡ್ಡ ಭಯಂಕರ ದೈತ್ಯೆಯಾಗಿದ್ದಳು. ಸಾಕಷ್ಟು ಪ್ರಾಣಿ ಪಕ್ಷಿಗಳನ್ನು ತಿಂದು ತೇಗಿದ್ದಳು. ಇವಳಿಗೆ ನೀರಡಿಕೆಯಾದಾಗ ೩೬೦ ದಾಸಿಯರು ಇವಳ ಬಾಯಿಗೆ ೩೬೦ ಕೊಡ ನೀರು ಹಾಕಬೇಕಂತೆ - ನೀರಿಗಾಗಿ ಬಾವಿಗೆ ಬಂದ ದಾಸಿಯರಿಗೆ ಭೈರವ, ಕರ್ಪೂರದಮ್ಮ ಇವರು ಕಣ್ಣಿಗೆ ಬೀಳುತ್ತಾರೆ. ಈ ದಾಸಿಯರು ಅವರನ್ನು ಕರೆದು ಈ ರೀತಿಯಾಗಿ ಹೇಳುತ್ತಾರೆ. ನೋಡಿ ನೀವು ನೋಡಲು ಬಹು ಅಂದವಾಗಿದ್ದೀರಾ, ಇಲ್ಲಿಗೆ ಯಾವ ನರ ಪ್ರಾಣಿಯೂ ಸಹ ಬರುವಂತಿಲ್ಲ. ನಮ್ಮ ರಕ್ಕಸಿಯ ಹೆಸರು ಕೇಳಿದರೆ ಸಾಕು ಮೂರು ಗಾವುದ ಓಡುತ್ತಾರೆ. ನಿಮ್ಮನ್ನೂ ನಮ್ಮ ದೈತ್ಯಳು ನೋಡಿದರೆ ಒಂದೇ ತುತ್ತಿಗೆ ನುಂಗುವಳೆಂದು ಸಲಹೆ ಕೊಟ್ಟರೂ ಸಹ ಭೈರವ ನಿಮ್ಮ ರಕ್ಷಸಿಗೆ ಹೆದರಿ ಓಡಿ ಹೋಗಲು ನಾವು ಬಂದಿಲ್ಲ ಸಂಹಾರ ಮಾಡಲು ಬಂದಿದ್ದೀವಿ. ಎಂದಾಗ ಚಂಡಿಗೆ ಸುದ್ದಿ ಮುಟ್ಟಿಸಿದರು ಆಗ ಚಂಡಿ ಎಲೇ ದಾಸಿಯರೇ ಆ ನರಹುಳುವನ್ನು ಎಳೆದು ತರುವುದನ್ನು ಬಿಟ್ಟು ಎಂತಹ ಅಪಮಾನದ ಮಾತುಗಳನ್ನು ಹೇಳುತ್ತೀರಾ ಎಂದು ರೇಗಾಡಿದಳು.

ಇತ್ತ ಭೈರವನು ರಕ್ಕಸಿಯ ಸಂಹಾರದ ವಿಷಯವಾಗಿ ಅಕ್ಕನ ಹತ್ತಿರ ಸಲಹೆ ಕೇಳಲು ಅಹೋ ತಮ್ಮ ಇವರಲ್ಲಿ ಸಾಕಷ್ಟು ವಿಷವುಂಟು, ವಿಷವೇ ಇವರಿಗೆ ಅಮೃತ ಇವರಲ್ಲಿ ಎಷ್ಟೆಷ್ಟು ವಿಷವಿರುತ್ತದೆಯೋ ಅಷ್ಟು ಬಲವನ್ನು ಹೊಂದಿರುತ್ತಾರೆ. ಆದ್ದರಿಂದ ನೀನು ಜೋಗಿಯ ರೂಪದಲ್ಲಿ ಬಿಕ್ಷೆ ಬೇಡಿ ವಿಷವನ್ನೆಲ್ಲಾ ಖಾಲಿ ಮಾಡಿ ಅವರನ್ನು ಸಂಹರಿಸು ಎಂದಾಗ ಈತ ಜೋಗಿಯ ರೂಪದಲ್ಲಿ ಹೋಗಿ ಬಿಕ್ಷೆ ಬೇಡುತ್ತಾನೆ. ವಿಷವನ್ನೆಲ್ಲಾ ಕುಡಿದು ಸಾವು ಬದುಕಿನ ಮಧ್ಯೆ ಹೋರಾಡುತ್ತಿರುವಾಗ ಅಕ್ಕ ಕರ್ಪೂರದಮ್ಮ ಗಾಬರಿಯಿಂದ ಬಂದು ತನ್ನ ತಲೆಯ ಕೂದಲಿನಿಂದ ಹೊಟ್ಟೆಯಲ್ಲಿರುವ ವಿಷವನ್ನು ತೆಗೆದು ಬದುಕಿಸಿದಳು. ಎಲಾ ತಮ್ಮಾ ರಕ್ಕಸಿಯರು ಅಸಾಧ್ಯರು, ಇವರ ಹತ್ತಿರ ಹುಡುಗಾಟ ಸಲ್ಲದು, ನೀನು ಕಾಲ ಭೈರವನ ಅವತಾರವನ್ನು ತಾಳಿ ಚಂಡಿಯನ್ನು ಸಂಹರಿಸಿ ಎಂದು ಆಜ್ಞೆ ಮಾಡುತ್ತಾಳೆ. ಆಗ ಅಕ್ಕನ ಅಪ್ಪಣೆಯನ್ನು ಪಡೆದು ಚಂಡಿಯನ್ನು ಸಂಹರಿಸುತ್ತಾನೆ. ಆಗ ಚಂಡಿಯನ್ನು ಸಂಹರಿಸಿದಾಗ ಭೈರವನ ಮನಸ್ಸಿಗೆ ಸಮಾಧಾನವೇ ಇರುವುದಿಲ್ಲ. ಚಂಡಿಯನ್ನು ಸಂಹಾರ ಮಾಡಿದ ನೆನಪಿಗಾಗಿ ಇವಳ ಕೋರೆಹಲ್ಲು ಕೂದಲನ್ನು ಕಿನ್ನೂರಿಯಾಗಿ ಮಾಡಿಕೊಂಡನು. ಜೋಗಿಯ ವೇಷದಲ್ಲಿ ಈತನ ಇದನ್ನು ನುಡಿಸುವಾಗ ಆ ನಾದವು "ರಕ್ಕಸಿಯ ಕೊಂದೇನೆಂದು ಎಲೇ ಜೋಗಿ ಗಕ್ಕು. ಮುಕ್ಕು ಮರೆಯಬೇಡ ಎಲೆ ಜೋಗಿ" ಎಂದು ಭೈರವನನ್ನು ಜರೆಯುವಾಗ ಈತ ಎತ್ತಿ ಬಡಿಯಲು ಹೋದಾಗ ಸ್ವಾಮಿ ತಪ್ಪಾಯ್ತು ನಾನು ಜೋಗಪ್ಪನ ಹತ್ತಿರ ಹೋಗುತ್ತೇನೆ. ವರ್ಷಕೊಮ್ಮೆಯಾದರೂ ಬಂದು ನಿನಗೆ ಕಪ್ಪ ಕಾಣಿಕೆ ಸಲ್ಲಿಸುತ್ತೇನೆಂದು ಆ ನಾದ ಹೇಳಿತಂತೆ ಅದು ಈಗ ಜೋಗಪ್ಪನವರ ಹತ್ತಿರವಿದೆ.

ನಂತರ ಭೈರವ ಸ್ವಾಮಿಯು ಯರಮಲೆ, ನಲಮಲೆ ಎಂಬ ಸ್ಥಳಗಳಿಗೆ ಬರುತ್ತಾನೆ. ಇಲ್ಲಿ ಬೇಡರಾದ ಕಾಟಣ್ಣನವರು ಏಳು ಜನ ಅಣ್ಣ ತಮ್ಮಂದಿರುಗಳು ಇವರಲ್ಲಿ ಕಾಟಣ್ಣನೊಬ್ಬನನ್ನು ಬಿಟ್ಟರೆ ಉಳಿದರೆಲ್ಲರೂ ಒರಟರು ಅಷ್ಟು ತಿಳಿವಳಿಕೆಯಿಲ್ಲದವರು ಸ್ವಾಮಿಯು ಜೋಗಿಯ ವೇಷದಿಂದ ಕಾಟಣ್ಣನವರ ಹೊಲದಲ್ಲಿ ಬಂದು ಬನ್ನಿಯ ಮರದ ಕೆಳಗಡೆ ಹುಲಿಯ ಚರ್ಮದ ಮೇಲೆ ಕೂತು ಪರಮಾತ್ಮನನ್ನು ಧ್ಯಾನಿಸುತ್ತಿರುವಾಗ ಇದು ಕಾಟಣ್ಣನಿಗೆ ಹೊಳೆಯುತ್ತದೆ. ಆಗ ಸ್ವಾಮಿಯನ್ನು ಮನೆಗೆ ಕರೆತರಲು ತಮ್ಮನಾದ ಬೋಸಯ್ಯನನ್ನು ಕಳಿಸುತ್ತಾನೆ. ಎಲೇ ತಿರಿದು ತಿನ್ನುವ ಜೋಗಿ ಎಂದು ಅವಾಚ್ಯ ಶಬ್ದಗಳಿಂದ ಭೈರವನನ್ನು ನಿಂದಿಸುತ್ತಾನೆ. ನಂತರ ಕಾಟಣ್ಣ ಬಂದು ಕ್ಷಮೆ ಕೇಳಿ ತನ್ನ ತಮ್ಮಂದಿರು ಮೂಡರು ದಯವಿಟ್ಟು ಕ್ಷಮಿಸಿ ತಮ್ಮ ಮನೆಗೆ ದಯಪಾಲಿಸ ಬೇಕು ಎಂದಾಗ ಸ್ವಾಮಿಯು ಮನೆಗೆ ಬಂದನು.

ಆ ಹೊತ್ತಿಗಾಗಲೇ ಬೊಸಯ್ಯನಿಗೆ ಜ್ಞಾನೋದಯವಾಗಿ ಭೈರವನ ಕಾಲಿಗೆ ಬಿದ್ದಿದನು. ಕಾಟಣ್ಣನವರ ಇಚ್ಛೆಯಂತೆ ಮನೆಗೆ ಬಂದ ಸ್ವಾಮಿಗೆ ಕರಿಯ ಕಂಬಳಿ ಗದ್ದುಗೆ ಹಾಕಿ ಈತನಿಗೆ ಎಡೆಯಾಗಿ ಬಿದಿರಕ್ಕಿ ಅನ್ನ, ಗುಬ್ಬಿಕರಿಸಾರು ನೀಡಲು, ಆಗ ಸ್ವಾಮಿಯು ಒಂದು ತ್ರಿಶೂಲವನ್ನು ನೆಟ್ಟು ಕಾಟಣ್ಣಾ ನನಗೂ ನಿನಗೂ ಗುರು ಈ ಗೋರಕ್ಷನಾಥ ಈತನಿಗೆ ಎಡೆ ಹಾಕಿರಿ ಎಂದಾಗ ಆಗ ಈ ಗೋರಕ್ಷಕನಾಥ ಹುಟ್ಟಿದನು. ಅಂದಿನಿಂದ ಇಂದಿನವರೆಗೂ ಕಾಟಣ್ಣನ ಕಡೆಯವರು ಜೋಗಿಯ ದೇವಸ್ಥಾನಕ್ಕೆ (ಗೋರಕ್ಷನಾಥನಿಗೆ) ''ಸಿದ್ದು ಬುಕ್ತಿ'' ಎಂಬ ಸಂಪ್ರದಾಯವನ್ನು ಮಾಡುತ್ತಾ ಬಂದಿದ್ದಾರೆ ಆಗ ಸ್ವಾಮಿಯು ತಿರಿದು ತಂದಿದ್ದನ್ನು ಪಾಯಸ ಮಾಡಿ ಅವರಿಗೆ ಸಿಹಿಯೂಟವನ್ನು ಉಣಬಡಿಸಿದನು ಈ ಭೋಜನವನ್ನು ಅವರು ಎಂದಿಗೂ ಕಂಡಿರಲಿಲ್ಲ ಹೊಟ್ಟೆ ಬಿರಿಯುವಷ್ಟು ಊಟ ಮಾಡಿದರು. ಆಗ ಸ್ವಾಮಿಯು ಕಾಟಣ್ಣನಿಗೆ ಒಂದು ರಾಜ್ಯ ಸ್ಥಾಪನೆಮಾಡಿ ಆ ರಾಜ್ಯಕ್ಕೆ ರಾಜ ನನ್ನಾಗಿಸಿ ಪಟ್ಟ ಕಟ್ಟುತ್ತಾನೆ. ಈ ವಿಷಯ ದ್ರೋಣಾದ್ರಿ ಮಲೆಯಲ್ಲಿ ವನವಿಹಾರವಾಗಿ ಸಂಚರಿಸುತ್ತಿದ್ದ ಕರ್ಪೂರದಮ್ಮನಿಗೆ ದಾಸಿಯರಿಂದ ತಿಳಿಯುತ್ತದೆ. ಆಗ ಕರ್ಪೂರದಮ್ಮನಿಗೆ ಸಿಟ್ಟುಬಂದು ಎಲಾ ಇವನಾ ನಾವು ಯಾವುದೋ ಕೆಲಸಕ್ಕೆ ಬಂದು ಬೇರೊಂದು ಕೆಲಸಕ್ಕೆ ಕೈ ಹಾಕಿರುವೆವಲ್ಲಾ ಎನ್ನುತ್ತಾ ಎರಮಲೆ, ನೆಲಮಲೆಗೆ ಬಂದು ತಮ್ಮನನ್ನು ಬೈಯ್ದು ಈ ಬೇಡರಿಗೆ ಏಕೆ ಪಟ್ಟ ಕಟ್ಟಿದೆ. ಇವರು ಕಾಡುಪ್ರಾಣಿಗಳನ್ನು ಹಿಡಿದು ತಿನ್ನುವವರು ಒರಟರು, ಒಳ್ಳೆಯರಲ್ಲ ಎಂದಾಗ ಕಾಟಣ್ಣನಿಗೆ ಸಿಟ್ಟು ಬಂದು ಅಹೋ ಸ್ವಾಮಿ ಈ ರಾಜ್ಯನೂ ಬೇಡ ಈ ಪಟ್ಟವೂ ಬೇಡ ಏನಿದ್ದರೂ ಹೆಣ್ಣು ಮಕ್ಕಳ ಬುದ್ಧಿ ಮೊಣಕಾಲು ಕೆಳಗೆ ಎಂದು ಹಿರಿಯರು ಹೇಳುವುದು ಸತ್ಯ ಎಂದು ತನ್ನ ಕಿರೀಟವನ್ನು ಎಸೆಯುತ್ತಾನೆ. ಆಗ ಕರ್ಪೂರದಮ್ಮ ಅಹೋ ಭಕ್ತಾ ಕಾಟಣ್ಣಾ ನಾನು ನಿನ್ನಲ್ಲಿರುವ ಭಕ್ತಿಯನ್ನು ಪರೀಕ್ಷಿಸಲು ಇಂತಹ ಮಾತುಗಳನ್ನಾಡಿದೆ.

ದಯವಿಟ್ಟು ಕ್ಷಮಿಸಿ ನನ್ನ ತಮ್ಮ ಕಟ್ಟಿದ ಪಟ್ಟ ಸುಳ್ಳು ಪಟ್ಟ ನಾನು ನಿಜವಾದ ಪಟ್ಟ ಕಟ್ಟುತ್ತೇನೆಂದು ಕಿರೀಟಧಾರಣೆಮಾಡಿ ಕರ್ಪೂರದಮ್ಮನೇ ಕಾಟಣ್ಣನ ಮಂತ್ರಿಯಾಗಿರುತ್ತಾಳೆ. ಬೇಸರಗೊಂಡ ಕಾಲಭೈರವ ಗಾಳಿಪೂಜೆಗೆಂದು ಹೋದನು. ಇತ್ತ ಕಡೆ ಕಾಟಣ್ಣನಿಗೂ ಬಲ್ಲಾಳ ರಾಯನಿಗೂ ಆಗುವುದಿಲ್ಲ ಇಬ್ಬರಿಗೂ ಘೋರವಾದ ಯುದ್ಧ ನಡೆಯುತ್ತದೆ. ಬಲ್ಲಾಳರಾಯನ ಹತ್ತಿರ ಭಾರೀ ಮದ್ದು ಗುಂಡುಗಳಿರುತ್ತವೆ. ಕರ್ಪೂರದಮ್ಮನು ಮಾತೆಯ ಮಳೆಯನ್ನು ತರಿಸಿ ಬಲ್ಲಾಳನಿಗೆ ಸೋಲುಂಟಾಗುವುದು. ಈತನನ್ನು ಕಾಟಣ್ಣನವರು ಸೆರೆಹಿಡಿದಿರುತ್ತಾರೆ. ಆಗ ಭೈರವ ಸ್ವಾಮಿಯು ಬಂದು ಕಾಟಣ್ಣನನ್ನೂ, ಕರ್ಪೂರದಮ್ಮನನ್ನೂ ಬೈಯ್ದು ಈ ರೀತಿಯ ಕಲಹ ಸರಿಯಲ್ಲ ರಾಜಸಂಧಾನದ ಮೇಲೆ ನಡೆಯಬೇಕೆಂದು ಹಿತ ಮಾತುಗಳನ್ನಾಡಿದನು. ಆಗ ಬಲ್ಲಾಳರಾಯನು

ಇದರ ಕೃತಜ್ಞತೆಗಾಗಿ ಭೈರವದೇವನಿಗೆ ಕಾಣಿಕೆ ಆಗಿ ತನ್ನಲ್ಲಿರುವ ಮೂರು ವಸ್ತುಗಳಾದ ಕಂಚಿನ ಬಾಗಿಲು, ಕಬ್ಬಿಣದ ರಣಭೇರಿ, ಟಗರು - ಇವುಗಳನ್ನು ಕೊಡುತ್ತೇನೆ ಎಂದನು. ಆಗ ಭೈರವ ಈಗ ಸದ್ಯಕ್ಕೆ ಟಗರನ್ನು ಮಾತ್ರ ಕೊಡು ನಾನು ಎಲ್ಲಿ ನೆಲೆಸುತ್ತೇನೆಯೋ ಅಲ್ಲಿಗೆ ಕಂಚಿನಬಾಗಿಲು, ಕಬ್ಬಿಣದ ರಣಭೇರಿಗಳನ್ನು ಕಳಿಸುವೆಯಂತೆ ಎಂದು ಹೇಳಿ ಕಳಿಸಿದ.

ಮತ್ತೆ ಇತ್ತ ಕಡೆ ಕಾಲಭೈರವ ಟಗರುನೊಂದಿಗೆ ಕಾಟಣ್ಣ, ಕರ್ಪೂರದಮ್ಮ ಎಲ್ಲಾ ಸಿಬ್ಬಂದಿಯು 'ಕುಮುತಿ' ದೇವಿಗೆ ಬಂದು ವಾಸವಾಗಿರುತ್ತಾರೆ. ಈ ಕಡೆ ಸುಂಕೆಮಲೆಯ ವೃತ್ತಾಂತ ತಿಳಿಯೋಣ ಇಲ್ಲಿ ರಸಸಿದ್ಧ, ಅಂಗ್ಸನೀಲವರ್ಣ ದಾಸಿಯರಾದ ಸುಂಕವ್ವ, ಮಲಿಯವ್ವ ಹಾಗೂ ಪಲುಮರಾಜರೆಂಬುವರು ವಾಸವಾಗಿದ್ದು ಇವರಲ್ಲಿ ಏಳು ಕಪ್ಪರಿಗೆ ವಿಷವಿರುತ್ತದೆಯಂತೆ ಈ ವಿಷದ ಕೊಪ್ಪರಿಗೆಗಳನ್ನು ಯಾವಾಗಲೂ ಸುಂಕವ್ವ, ಮಲಿಯವ್ವ ಎಂಬ ದಾಸಿಯರು ಕಾವಲಿರುತ್ತಿದ್ದರು. ಇವರಿಗೆ ವಿಷವೇ ಅಮೃತವಿದ್ದ ಹಾಗೆ ವಿಷದಿಂದ ಬದುಕುತ್ತಿದ್ದರು. ವಿಷವು ಕಾಲಿಯಾದಾಗಲೆಲ್ಲಾ ಆ ಬೆಟ್ಟಗಳಲ್ಲಿ ದೊರೆಯುವ ವಿಷದ ಗಿಡಮೂಲಿಕೆಗಳನ್ನು ತಂದು ಭಟ್ಟಿ ಇಳಿಸುವುದರ ಮೂಲಕ ಭರ್ತಿ ಮಾಡುತ್ತಿದ್ದರಂತೆ ಇದರ ಕುರುಹಾಗಿ ಮೇಲುಗಿರಿಯಲ್ಲಿ 'ರಸದೋಣಿ' ಎಂದು ಹೇಳುವ ಬಾವಿಯಿದೆ. ಇದು ಮೂರು ಅಡಿ ಉದ್ದ ಮೂರು ಅಡಿ ಅಗಲವಿದ್ದು, ಬಾರೀ ಆಳವಿದೆ, ಜನರು ಇದನ್ನು ರಸಸಿದ್ಧನ ದೋಣಿ ಎಂದು ಕರೆಯುವರು. ಮತ್ತು ಇವರ ವಾಹನವಾಗಿ ಕೋಣವಿರುತ್ತದೆ.

ಹೀಗಿರುವಾಗ ಈ ಕೋಣಕ್ಕೂ ಕುಮುತಿಯ ಹತ್ತಿರವಿರುವ ಸುಂಕಪ್ಪನ ಟಗರಿಗೂ ಗಾಡವಾದ ಸ್ನೇಹ ಬೆಳೆಯಿತು. ಇವು ಮೇಯಲು ಒಂದನ್ನು ಬಿಟ್ಟು ಒಂದು ಹೋಗುವಂತಿಲ್ಲ ಜೊತೆಗೂಡಿಯೇ ಹೋಗಬೇಕು. ಸುಂಕೆ ಮಲೆಯ ಬೆಟ್ಟದಿಂದ ಕೋಣ ಬಂದು 'ವಲಸೆ' ಎಂಬ ಗ್ರಾಮದ ಹತ್ತಿರ ಕಾಯುತ್ತಿರಬೇಕು. ಆಗ ಕುಮುತಿಯಿಂದ ಟಗರು ಬಂದು ಇವರೆಡೂ ಸೇರಿ ಗಾವುದ ಗಾವುದ ಮೇದು ಕೊಟ್ಟೂರು. ಉಜ್ಜಿನಿ ಕೆರೆಯಲ್ಲಿ ನೀರು ಕುಡಿದು ಮರಳಿ ಹಿಂದಕ್ಕೆ ಬರಬೇಕು ಹೀಗೆ ಇವೆರಡಕ್ಕೂ ಒಪ್ಪಂದವಾಗಿತ್ತು. ಒಂದು ದಿನ ಕೋಣವು ಬರಲು ತಡವಾಯಿತು. ಯಥಾಪ್ರಕಾರ ಟಗರು ಸರಿಯಾದ ಸಮಯಕ್ಕೆ ವಲಸೆಯ ಹತ್ತಿರ ಬಂದು ಕಾಯುತ್ತಿತ್ತು ಹಾದಿಯಲ್ಲಿ ನಿನ್ನೆಯ ಹೆಜ್ಜೆಯ ಗುರುತುಗಳನ್ನು ನೋಡಿ, ಕೋಣವು ತನ್ನನ್ನು ಬಿಟ್ಟು ಹೋಯಿತಲ್ಲಾ ಎನ್ನುತ್ತಾ ಸಿಟ್ಟಿನಿಂದ ಮೇಯುತ್ತಾ ಕಟ್ಟೂರಿನವರೆಗೂ ಹೋಯಿತು. ನಂತರ ಇತ್ತಕಡೆ ಕೋಣವು ತಡವಾಗಿ ಬಂತು. ಹೀಗೆ ಅವಸರವಸರವಾಗಿ ಬಂದ ಕೋಣವನ್ನು ಟಗರು ಹೊಡೆದು ಸಾಯಿಸಿತು. ನಿಜಾಂಶವನ್ನರಿತ ಟಗರು ಅನ್ಯಾಯವಾಗಿ ತನ್ನ ಸ್ನೇಹಿತನನ್ನು ಕಳೆದುಕೊಂಡೆನೆಲ್ಲಾ ಎಂದು ಹಾರಿ ತಾನೂ ಸಹ ಪ್ರಾಣ ಬಿಟ್ಟಿತು. ಎರಡು-ಮೂರುದಿನಗಳಾದರೂ ಕೋಣ ಬರಲಿಲ್ಲವೆಂದು ರಸಸಿದ್ಧನು 'ಪಲುಮರಾಜ'ರು ಎಂಬ ಇಬ್ಬರು ರಕ್ಕಸರನ್ನು ಕೋಣವನ್ನು ಹುಡಿಕಿತರಲು ಕಳಿಸುತ್ತಾನೆ. ಇವರು ಕುಮುತಿ ಹತ್ತಿರಕ್ಕೆ ಬಂದಾಗ ಸುಂಕಪ್ಪನು ನೀವು ಯಾರು? ಏನು? ಎತ್ತ? ಎಂದು ವಿಚಾರಿಸಿದಾಗ ಭಯಗೊಂಡು ನಾವು ಸಾಮಾನ್ಯ ಮಾನವರ ಕಣ್ಣಿಗೆ ಕಾಣುವಂತವರಲ್ಲ ಈತನಾರೋ ದೈವೀ ಪುರುಷನಿರಬೇಕೆಂದು ಕೊಂಡರು. ಈತ ತನ್ನದೂ ಸಹ ಟಗರು ಕಳೆದು ಹೋಗಿದೆ ನಡೆಯಿರಿ ಎಂದು ಹುಡುಕುತ್ತಾ ಹೋದರು. ಹೀಗೆ ಹೋಗುವಾಗ ಸುಂಕೇಮಲೆಯಲ್ಲಿರುವ ರಸಸಿದ್ಧನ ವೃತ್ತಾಂತವನ್ನೆಲ್ಲಾ ತಿಳಿದುಕೊಂಡಿದ್ದ. ಬಂದು ನೋಡಿದಾಗ ಉಜ್ಜನಿ ಕೆರೆಯಲ್ಲಿ ಕೋಣ ಟಗರುಗಳು ಸತ್ತು ಬಿದ್ದಿದ್ದವು. ಭೈರವನು ಸ್ಪರ್ಶಿಸಿದಾಗ ಅವುಗಳು ಭೂಲೋಕದಿಂದ ಮುಕ್ತಿ ಪಡೆದು ಗಾಂಧರ್ವ ಕನ್ಯೆಯರಾಗಿ ಮರುಜನ್ಮ ಪಡೆದವು. ಇವುಗಳನ್ನು ಜ್ಞಾಪಕಾರ್ಥವಾಗಿ ಉಜ್ಜನಿಯ ಹತ್ತಿರ ಕೋಣನಹಳ್ಳಿ, ಕುರುಬನಹಳ್ಳಿ ಎಂಬ ಹಳ್ಳಿಗಳನ್ನು ಭೈರವನು ಸ್ಥಾಪನೆ ಮಾಡಿದನು.

ನಂತರ ಭೈರವನು. ಪಲುಮರಾಜರು ಮರಳಿ ಕುಮುತಿ ಹತ್ತಿರ ಬಂದರು. ಇಲ್ಲಿ ಈತನ ಆಶ್ರಮದಲ್ಲಿ ಎಂತಹ ವೈರುಧ್ಯ ಪ್ರಾಣಿಗಳೂ ಸಹ ಅನೂನ್ಯವಾಗಿ ಕಾಲ ಕಳೆಯುತ್ತಿದ್ದವು. ಆಗ ಒಬ್ಬ ಪಲುಮರಾಜ ಎಂಬ ರಾಕ್ಷಸಿಯು ಒಂದು ಮೊಲವನ್ನು ತಿಂದು ಹಾಕಿತು. ಭೈರವನಿಗೆ ಸಿಟ್ಟು ಬಂದು ಬಾಣ ಹೂಡಿದ ಅವರು ಹೆದರಿ ಪಶ್ಚಿಮದ ಕಡೆಗೆ ಓಡುತ್ತಿರಲು ಅವುಗಳಿಗೆ ಬಾಣವನ್ನು ಬಿಟ್ಟು ಕಲ್ಲುಗಳಾಗಿ ಮಾಡಿಬಿಟ್ಟ. ಈಗ ಕುಮುತಿಯ ಕೆರೆಯ ಬಳಿ ರಕ್ಕಸರಾಕೃತಿಯ ಕಲ್ಲುಗಳಿವೆ. ಇವುಗಳನ್ನು ಜನರು ರಕ್ಕಸರ ಕಲ್ಲುಗಳೆಂದು ಕರೆಯುವರು.

ನಂತರ ಕಾಲಭೈರವನು ಅಕ್ಕನ ಅಪ್ಪಣೆಯನ್ನು ಪಡೆದು ರಾಕ್ಷಸರ ಸಂಹಾರಕ್ಕಾಗಿ ಕುಮುತಿಯಿಂದ ಸುಂಕೆಮಲೆಯ ಬೆಟ್ಟಕ್ಕೆಮಾಯಾಕುದುರೆಯನ್ನೇರಿ ಪ್ರಯಾಣ ಬೆಳಿಸಿದನು. ಅಲ್ಲಿ ಬಕ್ತನಾದ ಅರಳಯ್ಯನ ಪರಿಚಯವಾಯಿತು ಈ ಘೋರವಾದ ಮೇಲುಗಿರಿಯಲ್ಲಿ ರಸಸಿದ್ದರೆಂಬ ಪರಿವಾರದ ರಕ್ಕಸರು ಹಟ್ಟಹಾಸದಿಂದ ಮರೆಯುತ್ತಾರೆಂಬ ವಿಚಾರನ್ನು ಹರಳಯ್ಯನಿಂದಲೂ ಸಹ ತಿಳಿದನು. ಒಳ್ಳೆಯ ವಿಚಾರನ್ನೇ ಹೇಳಿದ ಹರಳಯ್ಯನನ್ನೂ ಪರಮಭಕ್ತನನ್ನಾಗಿಸಿಕೊಂಡ. ಈತನು ಯಾವಾಗಲೂ ಭೈರವನ ಅಂತರಂಗದಲ್ಲಿರುವನು ಆಗ ಭೈರವನು ಕುದುರೆಯನ್ನೇರಿಸಲು ದಾರಿಯೇ ಕಾಣದಾಯಿತು. ನಿಡಿದಾದ ಕರಿಯ ಬಂಡೆಯ ಮೇಲೆ ಕುದುರೆಯನ್ನು ಹಾರಿಸಿದನು. ಆದರೆ ದುರಾದೃಷ್ಠದಿಂದ ಮಾರ್ಗಮಧ್ಯದಲ್ಲಿ ಕುದುರೆಯು ಟಂಗ್ (ಲಗಾಮು) ಹರಿದು ಬಿಟ್ಟಿತು. ಭೈರವನಿಗೆ ಕಷ್ಟ ಬಂದುದಾಗಿತು. ಮೇಲುಗಿರಿಯಲ್ಲಿ ರಕ್ಕಸರ ಕೋಲಾಹಲ ದನಿಯು ಕೇಳಿಬರುತ್ತದೆ. ತನ್ನ ತಂದೆಯನ್ನು ಸ್ಮರಿಸುತ್ತಾ ಒಂದು ಹುಲ್ಲುಕಡ್ಡಿಯಿಂದ ಹನುಮಂತನನ್ನು ಬರೆದ ಈಗ ಆ ಸ್ಥಳದಲ್ಲಿ ಹನುಮಂತನ ಚಿತ್ರವಿದೆ. ಕಾಯಕವೇ ಕೈಲಾಸವೆಂದು ಹರಳಯ್ಯನು ಈ ಬೆಟ್ಟದ ತಪ್ಪಲು ಪ್ರದೇಶಲದ್ಲಿ ಕಟ್ಟಿಗಳನ್ನು ಸಂಗ್ರಹಿಸುತ್ತಿರುವಾಗ ಈತನ ಶೋಕಧ್ವನಿಯನ್ನು ಕೇಳಿಸಿಕೊಂಡು ಹೋಗಿ ವಿಚಾರಿಸಿ ನನ್ನ ಕಾಲಿನ ಹೆಬ್ಬಟ್ಟಿನಿಂದ ಜಿಗಿದ ನರವನ್ನೇ ಕುದುರೆಯ ಲಗಾಮಾಗಿ ಮಾಡಿಕೊಟ್ಟನು. ಆಗ ಭೈರವ ಅಹೋ ಮಹಾಭಕ್ತಿ ಹರಳಯ್ಯ ನಿನಗೆ ಬೇಕಾದ ಎರಡು ವರಗಳನ್ನು ಕೇಳಿಕೋ ಎಂದಾಗ ಈತ ಸಮಾಜಕ್ಕೆ ಪೂರಕವಾದುದ್ದನ್ನೇ ಕೇಳಿಕೊಂಡನು. ಒಂದನೆಯದಾಗಿ ಜಾತಿಭೇಧವಿಲ್ಲದೆ ನಿನ್ನ ಹೊಂಡದಲ್ಲಿ ಎಲ್ಲಾ ಜನಾಂಗದವರೂ ನೀರನ್ನು ಬಳಸಬೇಕೆಂಬೂದು, ಎರಡನೆಯದಾಗಿ ನೀನು ಎಲ್ಲಿ ನೆಲೆಸುತ್ತೀಯೋ ಅಲ್ಲಿ ನಿನ್ನ ಭಕ್ತರಿಂದ ನನಗೆ ಮೊದಲು ಪೂಜೆ ಸಲ್ಲಬೇಕೆಂದು ಕೇಳಿಕೊಂಡನು ಅದೇ ರೀತಿಯಲ್ಲಿ ಈತನ ಕ್ಷೇತ್ರವನ್ನು ಪ್ರವೇಶಿಸಲು ಎರಡು ದಾರಿಗಳುಂಟು ಎರಡು ದಾರಿಗಳ ಪ್ರವೇಶದಲ್ಲಿಯೂ ಸಹ ಈತನ ಗುಡಿಗಳನ್ನು ನಿರ್ಮಿಸಲಾಗಿದೆ.

ಇಲ್ಲಿಗೆ ಬರುವ ಭಕ್ತರು ಈತನಿಗೆ ಪೂಜೆಸಲ್ಲಿಸಿಯೇ ಮುಂದೆ ಹೋಗುತ್ತಾರೆ. ಆಗಿನ ಕಾಲದಲ್ಲಿ ಜಾತಿಪದ್ದತಿಯ ಪ್ರಭಾವವಿರುವುದರಿಂದ ಹೊಂಡದಲ್ಲಿ ' ಒಕ್ಕ ಬಳಕೆ' ಎಂದು ಕೇಳಿಕೊಂಡನು. ಹರಳಯ್ಯ ಲಗಾಮು ಮಾಡಿಕೊಟ್ಟ ನಂತರ ಮೇಲಕ್ಕೆ ಹೋಗಿ ಸ್ವಲ್ಪಸಮಯ ವಿಶ್ರಾಂತಿ ಪಡೆಯಲು ನೆರಳಿಗಾಗಿ ಒಂದು ಬಂಡೆಯನ್ನು ತಲೆಯಿಂದ ಮೇಲಕ್ಕೆ ಎತ್ತಿದ್ದಾನೆ. ತಲೆಯಿಂದ ಎತ್ತಿರುವ ಗುರುತೂ ಸಹ ಕಾಣುತ್ತದೆ. ಹಾಗೂ ಕುದುರೆಯನ್ನು ಹಾರಿಸುವಾಗ ಕುದುರೆ ಹೆಜ್ಜೆಗಳು ಸರಳ ರೇಖೋಪಾದಿಯಲ್ಲಿ ಕಾಣಿಸುತ್ತವೆ. ನಂತರ ಮುಂದೆ ಹೋಗಿ ಕಾಲಭೈರವನ ರೂಪ ಬಿಟ್ಟು ಜೋಗಿಯ ವೇಷವನ್ನು ಧರಿಸುತ್ತಾನೆ.

ಮೇಲುಗಿರಿಯಲ್ಲಿ ಸುಂಕಮ್ಮ ಮಲಿಯಮ್ಮ ಎಂಬ ರಕ್ಕಸಿಯರು ಏಳು ಕೊಪ್ಪಲಿಗೆ ವಿಷಕ್ಕೆ ಕಾವಲುಗಾರರಾಗಿರುತ್ತಾರೆ. ರಸಾಸಿದ್ದ ಮತ್ತು ಅಂಗ್ಲರೆಂಬ ದೈತ್ಯರು ವಿಷದ ತಯಾರಿಕೆಗಾಗಿ ಗಿಡಮೂಲಿಕೆಗಳನ್ನು

ತರಲು ಪೂರ್ವದ ಬೆಟ್ಟಗಳ ಕಡೆಗೆ ಹೋಗಿರುತ್ತಾರೆ. ಇವರನ್ನು ಸಂಹರಿಸುವುದು ಸುಲಭದ ಮಾತಲ್ಲ ವಿಷವೇ ಇವರಿಗೆ ಬಲ ಆದ್ದರಿಂದ ವಿಷವನ್ನು ಮೊದಲು ಖಾಲಿಮಾಡಬೇಕೆಂದು ಜೋಗಿಯ ವೇಶದಿಂದ ಅವರಲ್ಲಿಗೆ ಬಿಕ್ಷೆ ಬೇಡಲು ಹೋಗಿರುತ್ತಾನೆ. ಆಗ ದಾಸಿಯರಿಗೆ ಆಶ್ಚರ್ಯವಾಗುವುದು. ಇಲ್ಲಿಗೆ ಒಂದು ಕಾಗೆ ಸಹ ಬರುವುದಿಲ್ಲ ಈ ಜೋಗಿ ಎಷ್ಟು ಧೈರ್ಯವಾಗಿ ಬಂದಿರಬಹುದೆಂದರು. ಹೋಗಿ ಬಿಕ್ಷೆ ಬೇಡಿದಾಗ ನಮ್ಮಲ್ಲಿ ಆಹಾರವೇನಿಲ್ಲ ವಿಷವೇ ನಮಗೆ ಆಹಾರ. ಸರಿ ನೀನು ಯಾರು ? ಇಲ್ಲಿಗೆ ಒಂದು ನರಪಿಳ್ಳೆಯೂ ಸಹ ಬರಲಿಕ್ಕೆ ಹೆದರಿ ಸಾಯುತ್ತಾರೆ. ನಮ್ಮ ಒಡೆಯ ರಸಸಿದ್ದನೇನಾದರೂ ಬಂದರೆ, ನಿನ್ನನ್ನು ಸುಮ್ಮನೆ ಬಿಡಲಾರನು ಒಳ್ಳೆಯ ಮಾತಿನಿಂದ ಇಲ್ಲಿಂದ ತೊಲಗು ಎಂದು ಹೇಳುತ್ತಾರೆ. ಅವರಿಗೊಂದು ಆಸೆ ಹುಟ್ಟಿಸುತ್ತಾನೆ ನೋಡಿ ನಿಮಗೆ ಗಂಡರಿಲ್ಲದೆಯೇ ಮಕ್ಕಳ ಭಾಗ್ಯ ನೀಡುತ್ತೇನೆ ನೀವು ಈ ಪಾತ್ರೆಯ ತುಂಬಾ ವಿಷನ್ನು ಹಾಕಿರಿ ಎಂದಾಗ ಇದೇನು ಮಹಾ ಎಂದರು ಆದರೆ ಈ ಜೋಗಿಯ ಉಪಾಯದಿಂದ ಭೂಮಿಯನ್ನು ಅಗೆದು ಪಾತ್ರೆಯನ್ನು ತೂತುಮಾಡಿ ಇಟ್ಟನು. ಅವರು ಹಾಕಿದ ವಿಷವೆಲ್ಲಾ ಖಾಲಿಯಾಯಿತು. ಪಾತ್ರೆಯು ಮಾತ್ರ ತುಂಬಲಿಲ್ಲ ಅವರು ಭಯಭೀತರಾಗಿ, ಸ್ವಾಮಿ ನಮ್ಮ ಮುಂದಿನ ಗತಿಯೇನು ಎಂದಾಗ ನಿಮ್ಮಿಂದ ತುಂಬಾ ಉಪಕಾರವಾಯಿತು ಎಂದು ಅವರ ಹಣೆಗೆ ವಿಭೂತಿಯನ್ನು ಇಟ್ಟು ನಿಮಗೆ ಮುಂದೆ ಒಳ್ಳೆಯದಾಗುವುದೆಂದು ಹೇಳಿ ಮಾಯವಾದನು.

ಈತನ ದೃಷ್ಠಿ ಈಗ ರಸಸಿದ್ದನ ಸಂಹಾರ ರಸಸಿದ್ದ ಗಿಡ ಮೂಲಿಕೆಗಳನ್ನು ತೆಗೆದುಕೊಂಡು ಬರುತ್ತಿರಲು. ಭೈರವನು ಕುರುಬನ ವೇಷದಲ್ಲಿ ಕುರಿಗಳನ್ನು ಕಾಯುತ್ತಾ ಅವನ ಎದುರಿಗೆ ಬಂದನು ಇಬ್ಬರಿಗೂ ವಾದ- ವಿವಾದ ನಡೆದು ಕೊನೆಗೆ ಘೋರವಾದ ಯುದ್ದ ನಡೆಯಿತು. ಈ ಯುದ್ದವು ಸಿದ್ದನಾಥ ಬಂಡೆ ಎಂಬಲ್ಲಿ ನಡೆಯುತ್ತದೆ. ಇಲ್ಲಿ ಹೆಜ್ಜೆಯ ಗುರುತುಗಳನ್ನು ಮಂಡಿಯೂರಿ ಹೋರಾಡಿದ ಗುರುತುಗಳೂ ಸಹ ಕಂಡುಬರುತ್ತವೆ. ಇದನ್ನು ''ಗುಟ್ಟಾರಮ್ಮ'' ಎಂದು ಕರೆಯುವ ಸಂಪ್ರದಾಯವುಂಟು. ಯುದ್ದದಲ್ಲಿ ರಸಸಿದ್ದನ ಸಂಹಾರವಾಗುತ್ತದೆ ಈತನ ಚೆಂಡು ಮೇಲುಗಿರಿಯಲ್ಲಿ ಮುಳ್ಳುಬಿದಿರಿನ ಹತ್ತಿರ ರಸಾಸಿದ್ದನ ಚೆಂಡು ಎಂದು ಜನರು ಪೂಜಿಸುವ ಸಂಪ್ರದಾಯ ವುಂಟು. ಅನಂತರ ಅಂಗ್ಸನನ್ನು ಸಂಹಾರಮಾಡುತ್ತಾನೆ. ಈತನೊಬ್ಬ ರಕ್ತಬೀಜಾಸುರ ಒಂದು ಹನಿರಕ್ತ ನೆಲಕ್ಕೆ ಬಿದ್ದರೆ ಕೋಟ್ಯಾನುಗಟ್ಟಲೆಯಾಗಿ ರಕ್ಕಸರು ಹುಟ್ಟುತ್ತಾರಂತೆ.

ಭೈರವನು ಅಂಗ್ಸನೊಡನೆ ಕಾದು ನೂರಾರು ರಕ್ಕಸರನ್ನು ಸಂಹಾರ ಮಾಡಿ ಒಣವಿ ಹಾಕಿದ್ದನಂತೆ. ಹೀಗೆ ರಕ್ಕಸರು ಹಿಮ್ಮಡಿಯಾದಾಗ ಈತ ಯುದ್ದವಾಡಿ ದಣಿದು ತನ್ನ ಅಕ್ಕ ಕರ್ಪೂರದಮ್ಮನನ್ನು ನೆನೆಯುತ್ತಾ ಅಕ್ಕಾ... ಅಕ್ಕಾ.... ಎನಲು ಈ ಶಬ್ದ ಕುಮುತಿಯಲ್ಲಿರುವ ಕರ್ಪೂರದಮ್ಮನ ಕಿವಿಗೆ ಬಿತ್ತು. ಅರಳಯ್ಯನಿಂದ ವಿಚಾರ ತಿಳಿದು ಭಯಗೊಂಡು ಕರ್ಪೂರದಮ್ಮ ಕಾಟಣ್ಣ ಮತ್ತು ಈತನ ೧೦೧ ನಾಯಿಗಳನ್ನು ಕರೆದುಕೊಂಡು ಬಂದು ಬೆಟ್ಟದ ನಗಾರಿ ಬಂಡೆಯ ಹತ್ತಿರ ತಂದಿದ್ದ ರೊಟ್ಟಿ ಬುತ್ತಿಯನ್ನು ಊಟಮಾಡಿ ಅಲ್ಲೊಂದು ಕಲ್ಲಿನ ಮೇಲೆ ನಾಯಿಗಳಿಗೆ ಅನ್ನ ಹಾಕಿ ಕಾಟಣ್ಣ ಕರ್ಪೂದಮ್ಮನವರು ಪಗಡೆಯಾಟ ಆಡಿದರು ಆ ಗುರುತುಗಳು ಈಗಲೂ ಇವೆ. ನಂತರ ಕೋಟೆಯೊಳಗೆ ಹೋಗಲು ದಾರಿಯೇ ಕಾಣದಾಗಲು ಅಲ್ಲೊಂದು ಎತ್ತರವಾದ ಬಂಡೆಯನ್ನು ತನ್ನ ಒನಕೆಯಿಂದ ಹೊಡೆದು ಹಾದಿಮಾಡಿಕೊಂಡು ಹೋಗಿ ಕಾಟಣ್ಣನ ನೂರ ಒಂದು ನಾಯಿಗಳ ಸಹಾಯದಿಂದ ಅಂಗ್ಸನ ಸಂಹಾರವಾಗುತ್ತದೆ. ಈಗ ಈ ಕಿಂಡಿಯನ್ನು ಕರ್ಪೂರದಮ್ಮನ ಕಿಂಡಿ ಎಂದು ಕರೆಯುತ್ತಾರೆ. ಈ ದೇವಿಯ ಗುಡಿಯೊಳಗೆ ಒಂದು ಒನಕೆಯನ್ನು ಇಟ್ಟಿದ್ದಾರೆ. ಕಾಲಭೈರವ ಈ ಬೆಟ್ಟದಲ್ಲಿ ಎಲ್ಲಾ ರಕ್ಕಸರ ಅಟ್ಟಹಾಸವನ್ನು ಮೆಟ್ಟಿ ಹಾಕಿದನು.

ಸುಂಕವ್ವ, ಮಲಿಯವ್ವ, ಭೈರವ ಸ್ವಾಮಿಯನ್ನು ನೋಡಿ ಭಯದಿಂದ ಭೂಮಾರ್ಗವಾಗಿ ಇಳಿದು ಹೋಗುವಾಗ ತಾನು ಇಟ್ಟಿದ್ದ ವಿಭೂತಿ ಮಹಿಮೆಯಿಂದ ಇವರ ಚೆಂಡುಗಳು (ತಲೆಗಳು) ಮಾತ್ರ ಭೂಮಿಗೆ ಇಳಿಯಲಾಗಲಿಲ್ಲ ಅವನ್ನು ಜಡೆಹಿಡಿದು ಮೇಲಕ್ಕೆತ್ತಿದನು.

ನಂತರ ಎಲ್ಲಾ ರಕ್ಕಸಿಯರು ಸೇರಿ ಭೈರವನ ಕಾಲಿಗೆ ಬಿದ್ದು ಕ್ಷಮೆಕೇಳಿಕೊಂಡರು. ತಮ್ಮದೊಂದು ಕೋರಿಕೆಯನ್ನು ಕೇಳಿಕೊಂಡರು ನಮ್ಮ ಜ್ಞಾಪಕಾರ್ಥವಾಗಿ ಈ ಬೆಟ್ಟಕ್ಕೆ ನಮ್ಮಗಳ ಹಸರಿಡಬೇಕೆಂದಾಗ ಸುಂಕವ್ವನಿಂದ ಸುಂಕೆತೆಗೆದುಕೊಂಡ, ಮಲಿಯವ್ವನಿಂದ 'ಮಲೆ' ತೆಗೆದುಕೊಂಡ, ರಸಸಿದ್ದನಿಂದ ಸಿದ್ದ ತೆಗೆದುಕೊಂಡು ಈಶ್ವರನೆಂದು ತಮ್ಮ ತಂದೆಯ ಹೆಸರಿನೊಂದಿಗೆ ಸೇರಿಸಿ ಈ ಬೆಟ್ಟಕ್ಕೆ ಸುಂಕೆ ಮಲೆ ಸಿದ್ದೇಶ್ವರನೆಂದು ನಾಮಕರಣ ಮಾಡಿದನು.

ಭೈರವನಿಗೆ ರಕ್ಕಸರನ್ನು ಸಂಹಾರ ಮಾಡುವ ದಾಹ ಇನ್ನೂ ಮುಗಿದಿರಲಿಲ್ಲ ತನ್ನ ಗಮನ ಪೂರ್ವದ ಆಂಧ್ರದ ಕಡೆಗೆ ಇತ್ತು ಕರ್ಪೂರದಮ್ಮ ಉಪಾಯದಿಂದ ತಿಳಿಯಾಗಿ ಹರಿಯುತ್ತಿರುವ ಝರಿಯಲ್ಲಿ ಬೆತ್ತಲೆಯಾಗಿ ಸ್ನಾನ ಮಾಡುತ್ತಿದ್ದಳು. ತಮ್ಮಾ ಭೈರವ ನಾನು ಸ್ನಾನ ಮಾಡುವೆ ಅಲ್ಲೇ ನಿಲ್ಲು ಎಂದಾಗ ಅಕ್ಕನ ಮಾತುಗಳನ್ನು ಅರ್ಥಮಾಡಿಕೊಂಡ ಭೈರವ ಅಕ್ಕನ ಕಡೆಗೆ ಬೆನ್ನು ತಿರುಗಿಸಿ ಕಾಟಣ್ಣನವರ ಸಲಹೆಯಂತೆ ಅಲ್ಲಿ ನೆಲೆಸಿಂತ. ಕರ್ಪೂದಮ್ಮನೂ ಸಹ ಅಲ್ಲೇ ನಿಂತು ತುಪ್ಪದ ಓಕಳಿಯನ್ನು ಆಡಿದರು. ಈಗಲೂ ಸಹ ಅಕ್ಕನನ್ನು ನೋಡುವಂತಿಲ್ಲ ಎಂಬ ಸಂಪ್ರದಾಯವಿದೆ.

ಸುಂಕೇಮಲೆಯಲ್ಲಿ ಸ್ಥಾಪನೆಯಾದ ಸುದ್ದಿಯನ್ನು ತಿಳಿದ ಬಲ್ಲಾಳರಾಯನು ಕಂಚಿನ ಬಾಗಿಲು, ಕಬ್ಬಿಣದ ರಣಭೇರಿಯನ್ನು ತಂದು ಕೊಟ್ಟನು. ಕಂಚಿನ ಬಾಗಿಲು ಬಲ್ಲಾಳ ರಾಯನು ತಂದುಕೊಟ್ಟ ಉಡುಗೊರೆಯೆಂದು ಜನರು ಹೇಳುತ್ತಾರೆ. ಹರಳಯ್ಯನೂ ಸಹ ಹಿಂದಿನ ಮಾತಿನ ಪ್ರಕಾರ ಎರಡು ಕಡೆಯಲ್ಲೂ ಸಹ ತನ್ನ ಗುಡಿಗಳನ್ನು ನಿರ್ಮಿಸಿಕೊಂಡನು ನಂತರ ಭೈರವ ಸ್ವಾಮಿಯು ಭಕ್ತನಾದ ಕಾಟಣ್ಣನಿಗೆ ನಿನ್ನ ಮೂಲ ಸ್ಥಾನವಾದ ನಾಯಕನ ಹಟ್ಟಿಹತ್ತಿರ ದೊಡ ಮಾಂಡ್ಲಹಟ್ಟಿಗೆ (ರಾಮದುರ್ಗ) ಹೋಗಿ ನೆಲಸುವಂತರಾಗಿರಿ ವರುಪಕೊಂದು ಬಾರಿಯಾದರು ತಮ್ಮ ದರ್ಶನವಾಗಲಿ ಎಂದು ಕೇಳಿಕೊಂಡನು. ಈಗ ಇವರು ವರ್ಷಕೊಂದು ಸಾರಿ ಬಂದು ಹಾಲು, ತುಪ್ಪ, ಮೀಸಲಿಟ್ಟು 'ಸಿದ್ದು ಬುಕ್ತಿ' ಎಂದು ಬೇಟೆಗಳನ್ನು ಕೊಯ್ದು ವಿಶೇಷವಾಗಿ ಆಚರಿಸುವ ಸಂಪ್ರದಾಯವುಂಟು. ಕೊನೆಗೆ ತಮ್ಮ ಮಕ್ಕಳ ಘನಕಾರ್ಯವನ್ನು ಕೇಳಿ ಸಂತೋಷಪಟ್ಟ ಪರಮೇಶ್ವರನು ಇಲ್ಲಿ ತನ್ನದೊಂದು ಮೂರ್ತಿಯನ್ನು ಸ್ಥಾಪಿಸಿಕೊಟ್ಟನು.

ಜನಪದರಲ್ಲಿ ಜನಜನಿತವಾಗಿರುವ ಈ ಕಥೆಯೇ ಸುಂಕೇಮಲೆಯ ಮೌಖಿಕ ಚರಿತ್ರೆಯ ಮೂಲ ಆಕರ. ಈ ಕಥೆಯಲ್ಲಿ ಹೇಳುವ ಒಂದೊಂದು ಪುರಾವೆಗಳು ಸತ್ಯವೆಂಬಂತೆ ಐತಿಹ್ಯಗಳು ಸಿರುತ್ತವೆ. ಹಾಗೆ ನೋಡಿದರೆ ಈ ಕಥೆಗೆ ಪೂರಕವಾಗಿ ಐತಿಹ್ಯಗಳು ಇವೆಯೋ ಅಥವಾ ಇರುವ ಐತಿಹ್ಯಗಳಿಗೆ ಪೂರಕವಾಗಿ ಕಥೆಕಟ್ಟಿದ್ದಾರೊ ಎಂಬ ಸಂಶಯವೂ ಬರುತ್ತದೆ. ಈ ಕಥೆ ಮತ್ತು ಐತಿಹ್ಯಗಳನ್ನು ಜೊತೆಜೊತೆಗಿಟ್ಟು ಸತ್ಯಾಸತ್ಯತೆಯ ಬಗ್ಗೆ ವಿಶ್ಲೇಷಿಸಿದರೆ ಅನೇಕ ಒಳಹುಗಳು ದೊರೆಯುತ್ತವೆ. ಅಧ್ಯಯನಕ್ಕೆ ಹಲವು ದಾರಿಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಆ ದಾರಿಗಳಲ್ಲಿ ನಡೆದುದರ ಪ್ರತಿಫಲವೇ ಈ ಸಂಪ್ರಬಂಧವಾಗಿದೆ.

## ೭.೨.೨. ಗೀತೆಗಳು

ಜನಪದ ಸಾಹಿತ್ಯದ ಒಂದು ಮುಖ್ಯ ಪ್ರಕಾರ ಈ ಜನಪದಗೀತೆ. ಇದನ್ನು ಹಳ್ಳಿಯ ಹಾಡು ಎಂದೂ ಸಹ ಕರೆಯುತ್ತಾರೆ. ಜನಸಮುದಾಯದಲ್ಲಿ ವಾಕ್ಪರಂಪರೆಯಲ್ಲಿ ನಿರಂತರವಾಗಿ ಉಳಿದುಬಂದಿರುವ ಹಾಡುಗಳೇ ಜನಪದ ಗೀತೆಗಳು. ಅಥವಾ ಅನಕ್ಷರಸ್ತ ಜನಸಮೂಹದ ನಡುವೆ ವಾಕ್ ಸಂಪ್ರದಾಯದ ಮೂಲಕ ಹರಿದು ಬಂದಿರುವ ಒಂದು ಗುಂಪಿನ ಕಾವ್ಯ ಮತ್ತು ಸಂಗೀತಗಳ ಸಂಯೋಜನೆಯೇ ಜನಪದ ಗೀತೆಗಳಾಗಿವೆ. ಈ ಗುಂಪಿನ ನೆಲೆ ಪ್ರಧಾನವಾಗಿ ಗ್ರಾಮೀಣ ಸಮುದಾಯದ್ದು. ಇದು ಪ್ರಾಚೀನ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದೆ. ಈ ಗೀತೆಗಳಲ್ಲಿ ಗ್ರಾಮೀಣ ಜನರ ಸುಖ ದುಃಖ ಭಕ್ತಿಗಳನ್ನು ಕಾಣಬಹುದು. ಇದು ಯಾವುದನ್ನೇ ವಿವರಿಸಲಿ ಅದನ್ನು ನೇರವಾಗಿ ಹೇಳುತ್ತದೆ. ಅದನ್ನು ಪ್ರಯತ್ನ ಪೂರ್ವಕವಾಗಿ ಕಲಾತ್ಮಕಗೊಳಿಸುವುದಾಗಲೀ ಅಥವಾ ಕಾವ್ಯದ ಪರಿಣಾಮಗಳನ್ನು ತರಬೇಕೆನ್ನುವುದಾಗಲೀ ಇರುವುದಿಲ್ಲ. ಆದ್ದರಿಂದ ಜನಪದ ಗೀತೆಯು ಸಾಹಿತ್ಯ ಮೌಲ್ಯಕ್ಕಿಂತ ಸಾಮಾಜಿಕ, ಚಾರಿತ್ರಿಕ, ಮತ್ತು ಮನಶಾಸ್ತ್ರೀಯ ಮೌಲ್ಯಗಳಿಗೆ ಹೆಚ್ಚು ಒತ್ತು ಕೊಡುತ್ತದೆ.

ಜನಪದ ಗೀತೆ ಸಾಮಾನ್ಯ ಸದಸ್ಯರು ಭಾಗವಹಿಸಬಹುದಾದ ಒಂದು ಕಲೆ. ಜನಪದ ಸಮೂಹದ ಪ್ರತಿಯೊಬ್ಬರು ಗೀತೆಗಳನ್ನು ಬಲ್ಲವರಾಗಿರುತ್ತಾರೆ. ಇದರ ರೂಪ ತೀರಾ ಸರಳ. ಸಾಮಾನ್ಯವಾಗಿ ಅದು ಚಿಕ್ಕ ರೂಪಗಳಲ್ಲಿ ಬಳಕೆಯೂಗುತ್ತದೆ.

ಮಾನವ ಎಂದಿನಿಂದ ಆಚರಣೆಯನ್ನು ಮಾಡುತ್ತಾ ಬಂದನೋ ಅವುಗಳಿಗೆ ಸಂವಾದಿಯಾಗಿ ಜನಪದ ಹಾಡುಗಳನ್ನು ಸೃಷ್ಠಿಸಿಕೊಂಡಿದ್ದಾನೆ. ಸಾಮಾನ್ಯ ಜೀವಿಯಾದ ಹಳ್ಳಿಗನಿಗೆ ಶಿಷ್ಠ ಭಾಷೆಯ ಗ್ರಂಥವನ್ನು ಅರ್ಥ ಮಾಡಿಕೊಳ್ಳಲಾರದೆ ನಿರಕ್ಷಕ ಕುಕ್ಷಿಯಾದ ಅವನಿಗೆ ಜನಪದ ಹಾಡುಗಳೇ ವೇದಗಳಾದವು, ಮಂತ್ರಗಳಾದವು. ಈ ಕಾರಣದಿಂದ ಅವನು ತನ್ನದೇ ಆದ ಒಂದು ಬಾಯಿ ಗ್ರಂಥವನ್ನು ತಯಾರಿಸಿಕೊಂಡ. ಅದನ್ನು ಆಗಾಗ ಹಾಡಿ, ಆನಂದಪಟ್ಟು ಅವುಗಳನ್ನೇ ಎಲ್ಲಾ ಸಂಪ್ರದಾಯಗಳಿಗೂ ಅಳವಡಿಸಿಕೊಂಡ.

ಒಂದು ಗುಂಪಿನ ಪ್ರತಿಯೊಬ್ಬ ಸಾಮಾನ್ಯ ಸದಸ್ಯನೂ ಹಾಡುವ ಕ್ರಿಯೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುವುದರ ಮೂಲಕ ಅದನ್ನು ಕಲಿಯುತ್ತಾ ಹೋಗುತ್ತಾನೆ. ಉದಾ : - ಸೋಬಾನ ಪದಗಳು, ದೇವರ ಪದಗಳು. ಬದುಕಿನ ಪ್ರಮುಖ ಘಟ್ಟಗಳಲ್ಲಿ ಅಥವಾ ವ್ಯಕ್ತಿ ಜೀವನದ ನಿರ್ಣಾಯಕ ತಿರುವುಗಳಾದ ಬಾಲ್ಯ, ಯೌವನ, ಮದುವೆ, ಸಾವು ಇಂಥಹ ಸಂದರ್ಭಗಳಲ್ಲಿ ಹಾಡುಗಾರಿಕೆ ಜೊತೆಯಾಗುತ್ತದೆ.

ಇಂತಹ ಒಂದು ಜನಪದಗೀತೆಗಳನ್ನು ಸುಂಕೇ ಮಲಿ ಭೈರವನ ಮೇಲೆ ಭಕ್ತಿಯ ಆವೇಷದಿಂದ ಈ ಕ್ಷೇತ್ರದ ವ್ಯಾಪ್ತಿಗೊಳಪಟ್ಟ ಜನಪದ ಭಕ್ತಾದಿಗಳು ಹಾಡುವುದುಂಟು. ಇಲ್ಲಿ ಮೊಳಕಾಲ್ಮೂರಿನ ವಾಲ್ಮೀಕಿ ಜನಾಂಗದ 'ಓಬಕ್ಕ' ಎಂಬವರಿಂದ ಈ ಗೀತೆಗಳನ್ನು ಸಂಗ್ರಹಿಸಲಾಗಿದೆ.

# 'ಮಂಗಳಾರತಿ'

ಸಿದ್ದಾರ ಸಿದ್ಧ ಗುರುಸಿದ್ದಾರಲಿಂಗ ಬಂದಾತಗೆ (ದಾ)
ಕುಮುತಿಯ ಬಯಲಾಗ ನಿಂತಾತಗೆ,
ಇಂಬುಸಲಾ ಒಂದು ಬಳಲಕೆ ನೋಡುವಂತೆ
ಲಿಂಗ ಭೈರವ ಗಾರುತಿ ಎತ್ತಿರೇ
ಮಂಗಲ ಜಯ ಮಂಗಲ ಮಂಗಳ ಶುಭಾ ಮಂಗಳ.

ಎದುರು ಬಂಡೆಗೆ ಕುದುರೆ ಬಿಟ್ಟಾತಗೇ
ಟೆಂಗೀನ ಟಂಗು ಹರಿದುನಿಂತಾತಗೇ
ಕೊನೆಯ ಪಾದಾಲಿಂಗ ಚರ್ಮ ಸುಲಿದ ಕೊಟ್ಟ
ಮೊದಲ ಪೂಜೆ ಕೊಡಿರೋ ಹರಳಯ್ಯಗೆ
ಮಂಗಲ ಜಯ ಮಂಗಲ ಮಂಗಳ ಶುಭಾ ಮಂಗಳ.

ಮೊದಲ ಪುಜೇ ಕೊಡಿರೋ ಹರಳಯ್ಯಾಗೆ
ಹೊಂಡದ ಒಕ್ಕ ಒಳಕೆ ಕೊಡಿರೋ ದೊಡ್ಡಾತಗೇ
ಲಿಂಗಾವಂತಾರೆಲ್ಲ ಶೀಲ ಎಲ್ಲಾದಂತೆ ಎಲ್ಲಾರೂ ಒಕ್ಕಬಳಕೆ ಹೊಂದಲಿ
ಮಂಗಲ ಜಯ ಮಂಗಲ ಮಂಗಳ ಶುಭಾ ಮಂಗಳ.

ಹಣೆಯಲ್ಲಿ ವಿಭೂತಿ ಧರಿಸಿದಾತಾಗೇ
ಕೈಯ್ಯಲ್ಲಿ ಕಿನ್ನೂರಿ ಹಿಡಿದಾತೆಗೇ
ರುದ್ರಾಕ್ಷಿ ಸರವ ಕೊರಳಲ್ಲಿ ಧರಿಸಿದ ಮುಕ್ಕಾಣ್ಣಗೆ ಆರತಿ ಎತ್ತಿದೇ
ಮಂಗಲ ಜಯ ಮಂಗಲ ಮಂಗಳಾ ಶುಭ ಮಂಗಳಾ.

ಹಣೆಯಲ್ಲಿ ವಿಭೂತಿ ಧರಿಸಿದಾತಾಗೇ
ಕೈಯ್ಯಲ್ಲಿ ಕಿನ್ನೂರಿ ಹಿಡಿದಾತೆಗೇ
ರುದ್ರಾಕ್ಷಿ ಸರವ ಕೊರಳಾಗೆ ಮೊಳಕಾಲ್ಮುರು ಅಡ್ಡಾ ಗುಡ್ಡದ ನಡುವೆ ಸಿದ್ದ ಲಿಂಗಾಗೆ
ಮಂಗಲ ಜಯ ಮಂಗಲ ಮಂಗಳ ಶುಭಾ ಮಂಗಳ.

ಎದೆ ಮೇಲೆ ಪಾತುಗೆ ಧರಿಸಿಧಂತಗೇ
ನೆತ್ತಿ ಮೇಲೆ ಜಡೆಗಳ ಹೊತ್ತಾತಗೆ
ಬೆನ್ನಲ್ಲಿ ತ್ರಿಶೂಲ ಮೊಳಕಾಲ್ಮುರು ಲಿಂಗಭೈರವ ಗಾರುತಿ ಎತ್ತಿರೇ
ಮಂಗಲ ಜಯ ಮಂಗಲ ಮಂಗಳ ಶುಭಾ ಮಂಗಳ.

## ''ಸೋಬಾನ ಪದ''

ಏಳುತಲೇ ನೆನದೇವ ಸಿದ್ಧ ಶಿವ ಜೋಗಿಯಾ ವದ್ದಿಕೆರೆಯಾ
ಶಿವ ಭೈರವನಾ ಸೋಬಾನವೇ
ವದ್ದಿಕೆರೆಯ ಅಣ್ಣಾ ಭೈರವನಾ ನೆನೆದಾರೆ ಇದ್ದ ಪಾಪಗಳು
ಪಾರಿಯಾರ ಸೋಬಾನವೆ

ಎದ್ದೇನಾ ನೆನದೇವಾ ಮುದ್ದು ಮಕದಯ್ಯಾ
ಮುತ್ತಿನ ಕೆಂಜೆಡೆಯಾ ಭೈರವನಾ ಸೋಬಾನವೇ
ಮುತ್ತಿನ ಕೆಂಜೆಡೆಯಾ ಭೈರವನಾ ನೇನದಾರೆ ಇದ್ದ
ಪಾಪಗಳು ಪರಿಹಾರ ಸೋಬಾನವೇ

ಏಳುತಲಾ ಎದ್ದೇವೆ ಅಪ್ಪಾನಾ ನೆನದೇವು
ಇಪ್ಪತ್ತು ಕೋಟೆ ನವ ಕೋಟೆ ಸೋಬಾನವೇ
ಇಪ್ಪತ್ತು ಕೋಟೆ ನವಕೋಟೆ ಶಿವರಥವಾ
ಕಳಸಧರಿಸೀದಾತ ಪರಿಹಾರ ಸೋಬಾನವೇ

ಜಾಂಬೂರಾಣಿ ಒಯ್ದು ಸ್ವಾಮೀಗೆ ಹಾಕೇವಾ
ಕಾಲೊದ್ದಿ ನಾವು ಶಿರಬಾಗಿ ಶಿವಗೆ ಸೋಬಾನವೇ
ಕಾಲೊದ್ದಿ ನಾವು ಶಿರಬಾಗಿ ಶಿವಸಿದ್ಧಯ್ಯಾ ಸ್ವಾಮೀನ
ಮೊದಲು ನೇನದೇವಾ ಸೋಬಾನವೇ

ಮುಡ್ಡೀನಾ ದೂಪಾಒಯ್ದು ದೊಡ್ಡಾಳಿಗಾಕೇವಾ
ದೊಡ್ಡ ದೀಪಾವಳಿಯ ಮೇಲೆ ಇರುವಳೇ ಸೋಬಾನವೇ
ದೊಡ್ಡ ದೀಪಾವಳಿಯ ಮೇಲೆ ಇರುವೋಳೆ ತುಪ್ಪದಮ್ಮ
ನಾ ದೊಡ್ಡಜ್ಜನ ಮಗಳು ಹಿರಿಯಕ್ಕನಾ ಬಲದಂಡೇ ಸೋಬಾನವೇ

ಎದ್ದರೂ ನಿಮಗ್ಯಾನ ಬಿದ್ದರೂ ನಿಮಗ್ಯಾನ
ಮೊಗ್ಗುಲೇರಿದರೂ ನಿಮಾಗ್ಯಾನ ಸೋಬಾನವೇ
ಮೊಗ್ಗಲೇರಿದರೇ ನಿಮಗ್ಯಾನ ದೇವರ ಗುಡ್ಡ ಸಿದ್ದಯ್ಯಾ
ಮನದಲ್ಲಿ ನೆನದೇವಾ ಸೋಬಾನವೇ

ಹಾಲೀನ ಜಲದಯ್ಯಬಾಲೇ ಈ ಗುಲದಯ್ಯ ಲೋಲಾವೋ
ದೋಣಿ ಹರಳಯ್ಯ ಸೋಬಾನವೇ
ಲೋಲಾವೋ ದೋಣಿ ಮರಳಯ್ಯ ನಿಂತಾದಾವೋ ಈಗ
ಕೊಂಡಾಡಿ ಮನದಾಗಿ ಸೋಬಾನವೇ

ದೊಡ್ಡೋನು ಜಲದಯ್ಯ ಎದೆಗಾರ ಜಲದಯ್ಯ
ಅತ್ತಾ ಒಂದೋಣಿ ಮರಳಯ್ಯಾ ಸೋಬಾನವೇ
ಅತ್ತಾ ಒಂದೋಣಿ ಮರಳಾಗಿಂಪಾದವೋ ಮತ್ತೆ
ಕೊಂಡಾಡಿ ಸಿದ್ದಯ್ನ ಮನದಲ್ಲಿ ಸೋಬಾನವೇ

ಜೋಳದಾನ್ನ ರಾಶಿ ದೂಳೀ ಮಾಡಿದಯ್ಯಾ
ಬಾಲೇರಿಗೆ ಬಸವ ನಾಳದಯ್ಯ ಸೋಬಾನವೇ
ಬಾಲೇರಿಗೆ ಬಸವ ನಳದಯ್ಯಾ ಒದ್ದೋಣಿ ಸಿದ್ದಯ್ಯ
ನಮದನಿಗೆ ಬಾಯಾಡಿದ ಸೋಬಾನವೇ

ಸಜ್ಜೇದನ್ನ ರಾಶಿ ನುಗ್ಗು ಮಾಡಿದಯ್ಯಾ ಬದ್ರೀರಿಗೆ
ಬಸವ ನಳದಯ್ಯಾ ಸೋಬಾನವೇ
ಬದ್ರೀಗೆ ಬಸವನಳದಯ್ಯಾ ಸಿದ್ಧಯ್ಯ
ನಮದನಿಗೆ ಬಾಯಾಡಿದ ಸೋಬಾನವೇ.

## ''ಕೋಲುಪದ''

ಹಟ್ಟಿಯ ಗೌಡರೇ ಮುಟ್ಟಿಕೊಂದೀಳ್ಯಾವೂ ತಾಸೆಂದನ್ನಾ ನಾ
ಬುಟ್ಟು ಅನ್ನ ಕೊಲ್ಲು ಬರಬೇಕು ಕಿನ್ನಾರ ಕೋಲು ಕೋಲು
ಬುಟ್ಟು ಅನ್ನಕೊಲ್ಲು ಬರಬೇಕು ಸಿದ್ಧಯ್ಯನ ತಾಸೆಂದನ್ನಾ ನೇ
ಗಟ್ಟಿವುಳ್ಳಾರ ಮಠವಾ ನಿಲಬೇಕು ಕಿನ್ನಾದ ಕೋಲು ಕೋಲೆ

ಹಳ್ಳೀಯ ಗೌಡರೇ ಕೊಳ್ಳೀರೊಂದೀಳ್ಳೆವೂ ತಾಸೆಂದನ್ನಾ ನಾ
ತೆಳ್ಳು ಅನ್ನಕೊಲ್ಲು ಬರಬೇಕು ರನ್ನಾದ ಕೋಲು ಕೋಲೆ
ತೆಳ್ಳು ಅನ್ನಕೊಲ್ಲು ಬರಬೇಕು ಸಿದ್ಧಯ್ಯಾನಾ ತಾಸೆಂದನ್ನಾ ನ
ಬೆಟ್ಟ ಬೆಳ್ಳಾನೇ ಮಠವಾ ನಿಲಬೇಕು ರನ್ನಾದ ಕೋಲು ಕೋಲೆ

ಎಲ್ಲಾರು ಮಠಗಳು ಕಲ್ಲೀಲಿ ಕಟ್ಟೀಸ್ಯಾರೇ ತಾನೆಂದನ್ನಾನಾ
ಸ್ವಾಮಿ ಸಿದ್ದಯ್ಯಾ ಮಠಗಳು ರನ್ನಾದ ಕೋಲು ಕೋಲೆ
ಬೆಲ್ಲಾದ ಹಚ್ಚೀಲಿ ತರುಗಳಾನಾಕೀರಾ ತಾನೆಂದನ್ನಾನೇ
ಹಾಲೇನು ಸಕ್ಕರೆ ಹೊಳೆನೀರು ರನ್ನಾದ ಕೋಲು ಕೋಲೆ
ಹಾಲೇನು ಸಕ್ಕರೆ ಹೊಳೆನೀರು ಒಯ್ಯುದಾರೇ ತಾನೆಂದನ್ನಾನಾ

ಜೇನೀನ ತುಪ್ಪದಲಿ ನೆಲದರೀ ರನ್ನಾದ ಕೋಲು ಕೋಲೇ
ಜೇನೀನ ತುಪ್ಪದಲಿ ನೆಲದರೀ ನಾಡ್ಯಾಣ ತಾನೆಂದನ್ನಾನಾ
ಮಲ್ಲಿಗೆ ಹೂವ್ವೇಲಿ ಮಲ್ಲಾ ಮಡಿರನ್ನಾದ ಕೋಲು ಕೋಲೆ
ಬೆಳ್ಳನ್ನ ಕಲ್ಲೇಲಿ ಕಟ್ಟಸಿದ ಮಠಗಳು ತಾನೆಂದನ್ನಾನಾ

ಬೆಟ್ಟಾದ ಮಲ್ಲಣ್ಣ ಗೆದುಕಾಗಿ ರನ್ನಾದ ಕೋಲು ಕೋಲೆ
ಬೆಟ್ಟಾದ ಮಲ್ಲಣ್ಣ ಗೆದುಕಾಗಿ ಗುರುಸ್ವಾಮಿ ತಾನೆಂದನ್ನಾನಾ
ಕಟ್ಟಿಸಿದ ಮಠಗಳು ಕಲ್ಲೀಲಿ ರನ್ನಾದ ಕೋಲು ಕೋಲೆ

ಬುಟ್ಟನ್ನಾ ಕಲ್ಲೀಲಿ ತಿರುಗಿಸಿದ ಮಠಗಳು ತಾನೆಂದುನ್ನಾನಾ
ಪರ್ವತ ಮಲ್ಲಣ್ಣಗೆದುರಾಗಿ ರನ್ನಾದ ಕೋಲು ಕೋಲೇ
ಪರ್ವತ ಮೆಲ್ಲಣ್ಣಗೆದುರಾಗಿ ಗುರುಸ್ವಾಮಿ ತಾನೆಂದನ್ನಾನಾ
ತೇರೆಳಿಸಿದ ಕಲ್ಲು ಮಠಗಳು ರಾನ್ನಾದ ಕೋಲು ಕೋಲೇ

ಬಾಗಿಲಕಡಿದಾಣ್ಣಾಗೆ ಬಾಳಿಯಣ್ಣಾ ಕೊಡಿರೋ ತಾನೆಂದನ್ನಾನೇ
ಬಾಗಿಲು ಕಡಿದಂಥಾ ಬಡವರಿಗೆ ರನ್ನಾದ ಕೋಲು ಕೋಲೇ
ಬಾಗಿಲ ಕಡಿದಂಥಾ ಬಡವರಿಗೆ ಸಿದ್ದಯ್ಯನಾ ತಾನೆಂದನ್ನಾನಾ
ಬಾಳೀನ ಜೋಳಿಗೇ ಹಣ ಕೊಡಿರೋ ರನ್ನಾದಾ ಕೋಲೇ ಕೋಲೆ

ಕಂಬ ಕಡಿದಾಣ್ಣಾಗೆ ನಿಂಬೆ ಹಣ್ಣಾ ಕೊಡಿರೋ ನಾನೆಂದನ್ನಾನೇ
ಕಂಬೇನ ಜೋಳಿಗಿ ಹಣಕೊಡಿರೋ ರನ್ನಾದ ಕೋಲು ಕೋಲೇ
ಕಂಬೇನ ಜೋಳಿಗಿ ಹಣಕೊಡಿರೋ ದೇವರಗುಡ್ಡ ತಾನೆಂದನ್ನಾನಾ
ಕಂಬೇನ ಕಡಿದಂಥ ಬಡವರಿಗೆ ರನ್ನಾದಾ ಕೋಲು ಕೋಲೇ

ಗಾಜೀನ ಕಂಬವಾ ನೋಡಿ ಬನ್ನಿ ತಾನೆಂದನ್ನಾನೇ
ಗಾಜೀನನ್ನ ಕಂಬಾವೂ ನಗುತಾವೆ ರನ್ನಾದ ಕೋಲು ಕೋಲೆ
ಗಾಜೀನನ್ನ ಕಂಬಾವೂ ನಗುತಾವೇ ಬಡಿಗೇರಣ್ಣಾ ತಾನೆಂದನ್ನಾನೇ
ಕೆತ್ತು ತಲೆ ಮುತ್ತು ಬಿಗಿದಾನೇ ರನ್ನಾದಾಕೋಲು ಕೋಲು

ಅಕ್ಕಾ ತುಪ್ಪದಮ್ಮಾ ನ್ನಾ ಹೋಗಿ ನೋಡನಾ ಬನ್ನಿ ತಾನೆಂದನ್ನಾ ನಾ
ಉಕ್ಕಿನ ಕಂಬಾವೂ ನಗುಣವೆ ರನ್ನಾದ ಕೋಲು ಕೋಲೆ
ಉಕ್ಕಿನ ಕಂಬಾವೂ ನಗುತಾವೇ ಬಡೇಗೇರಣ್ಣಾ ತಾನೆಂದನ್ನಾ ನಾ
ಕೆತ್ತುತಲೆ ಮುತ್ತು ಬಿಗಿದಾನೇ ರನ್ನಾದ ಕೋಲು ಕೋಲೇ

ಬಾಗಿಲು ನೋಡಿದಿರೀ ಬಾಗಿಲು ಸಿರಿನೋಡಿ ತಾನೆಂದನ್ನಾ ನಾ
ಬಾಗಿಲಿಗೆ ಬೆಳ್ಳಿ ಬಿಗಿಸ್ಯಾರ್ಯಾ ರನ್ನಾದ ಕೋಲು ಕೋಲೆ
ಬಾಗಿಲಿಗೆ ಬೆಳ್ಳಿ ಬಿಗಿಸ್ಯಾರ್ಯಾ ಮೊಳಕಾಲ್ಮುರು ತಾನೆಂದಾನ್ನಾ ನಾ
ಗೌಡರು ಇನ್ನೆಂಥ ಧನಕರು ರನ್ನಾದ ಕೋಲು ಕೋಲೇ

ಹೊಸ್ತಿಲ ನೋಡಿದಿರೇ ವಸ್ತಿಲ ನಯಸಿರಿ ತಾನೆಂದನ್ನಾ ನೇ
ಹೊಸ್ತಿಲಿಗೆ ಮುತ್ತು ಬಿಗಿಸೆರೇ ರನ್ನಾದಾ ಕೋಲು ಕೋಲೇ
ಹೊಸ್ತಿಲಿಗೆ ಮುತ್ತು ಬಿಗಿಸ್ಯಾರೇ ಹಾನಗಲ್ಲು ತಾನೆಂದನ್ನಾ ನೇ
ಅಕ್ಕ ಹರಿಸುತಾಳೆ ಮಠದಲ್ಲಿ ರನ್ನಾದಾ ಕೋಲು ಕೋಲೇ

ರಾಗಿ ರಾಗಿ ರಾಗೀ ಎನ್ನಾ ಪೂಜಿತಾನೆಂದನ್ನಾ ನಾ
ರಾಜರು ಮಾಡಿದ ದಶಪೂಜೆ ರನ್ನಾದ ಕೋಲೆ ಕೋಲೇ
ರಾಜರು ಮಾಡಿದ ದಶಪೂಜೆ ಸಿದ್ದಯ್ಯ ತಾನೆಂದನ್ನಾ ನೇ
ರಾವು ಉಳಿಸುತಾನೇ ಮಠದಲ್ಲಿ ರನ್ನಾದ ಕೋಲು ಕೋಲೇ

## ''ಗಂಗೆನಾ ಪಾಲಿಸೋ ಶಿವನೇ ನಾರಾಯಣ''

ಅಕ್ಕಿ ಹಾರದನ್ನಾ ತಕ್ಕಂಬರೋಳಿಗೆ ಇಕ್ಕೇನು ಬಾರೋ ಮಡಿವಾಳ
ಗಂಗನಾ ಪಾಲಿಸಯ್ಯಾ ಗಂಗೀನೋ ಪಾಲಿಸೋ
ಶಿವನೇ ನಾರಾಯಣ ಗಂಗಮ್ಮ ನಾ ಪಾಲಿಸಯ್ಯಾ

ಇಕ್ಕೇನಾ ದೇವರ ಮಡಿವಾಳದೇವರಗುಡ್ಡ
ಅಪ್ಪ ನಾಣ್ಯವೋ ಹೋಗಿ ತಾರೋ ಗಂಗೆನಾ ಪಾಲಿಸಯ್ಯಾ
ಗಂಗೆನೋ ಪಾಲಿಸೋ ಶಿವನೇ ನಾರಾಯಣ ಗಂಗಮ್ಮ ನಾ ಪಾಲಿಸಯ್ಯಾ

ಕೇಸರಕ್ಕನ್ನ ಸಾರಂಗದೋಳಿಗೆ ನೀಡೇನು ಬಾರೋ
ಮಡಿವಾಳ ಗಂಗೇನಾ ಪಾಲಿಸಯ್ಯಾ ಗಂಗೆನೋ ಪಾಲಿಸೋ
ಶಿವನೋ ನಾರಾಯಣ ಗಂಗಮ್ಮ ನ ಪಾಲಿಸಯ್ಯಾ

ಸಿದ್ದಯ್ನ ಕೆರೆಗೋಗಿ ಹೋಗಿ ನವ ತಿಂಗಳ ಅಕ್ಕ
ನಾಣ್ಯಾವೂ ನೆನೆಯಲಿಲ್ಲ ಗಂಗೆನಾ ಪಾಲಿಸಯ್ಯಾ ಗಂಗೆನಾ
ಪಾಲಿಸೋ ಶಿವನೇ ನಾರಾಯಣ ಗಂಗಮ್ಮ ನ ಪಾಲಿಸಯ್ಯಾ

ಅಕ್ಕನಾ ನಾಣ್ಯಾವು ನೆನೆಯದಿದ್ದರೂ ನಾವು
ಮುಕ್ಕಣ್ಣಾಗೆ ಓಲೆ ಬರೆದೇವೆ ಗಂಗೆನಾ ಪಾಲಿಸಯ್ಯಾ
ಗಂಗೆನೋ ಪಾಲಿಸೋ ಶಿವನೇ ನಾರಾಯಣ ಗಂಗಮ್ಮ ನ ಪಾಲಿಸಯ್ಯಾ

ಮುಕ್ಕಣ್ಣಗೋಲೆ ಏನೆಂದು ಬರೆದೇವೆ ಆದ್ರಿಯ
ಮಳೆ ಬರಬೇಕು ಗಂಗೇನಾ ಪಾಲಿಸೋ
ಶಿವನ ನಾರಾಯಣ ಗಂಗಮ್ಮ ನ ಪಾಲಿಸಯ್ಯಾ

ತಾಯವ್ವನ ಕೆರೆಗೋಗಿ ಹೋಗಿ ನವ ತಿಂಗಳು ಸ್ವಾಮಿ
ನಾಣ್ಯಾವು ನೆನೆಯಲಿಲ್ಲ ಗಂಗನಾ ಪಾಲಿಸಯ್ಯಾ
ಗಂಗೆನೋ ಪಾಲಿಸೋ ಶಿವನೇ ನಾರಾಯಣ ಗಂಗಮನಾ ಪಾಲಿಸೋ.

ಸ್ವಾಮಿಯ ನಾಣ್ಯವೂ ನೆನೆಯದಿದ್ದರು ನಾವು ಈಶ್ವರ ಸಿಗೋಲೆ ಬರೆದೇವು
ಗಂಗೆ ನಾ ಪಾಲಿಸಯ್ಯಾ ಗಂಗೆನೊಪಾಲಿಸೋ ಶಿವನೇ ನಾರಾಯಣ
ಗಂಗಮ್ಮ ನಾ ಪಾಲಿಸಯ್ಯಾ

ಈಶ್ವರನಿಗೋಲೆ ಏನೆಂದು ಬರೆದೇವು ಉತ್ರಿಯ ಮಳೆ ಬರಬೇಕು
ಗಂಗೆನಾ ಪಾಲಿಸಯ್ಯಾ ಗಂಗೆನೋ ಪಾಲಿಸೋ ಶಿವನೇ ನಾರಾಯಣ
ಗಂಗಮ್ಮ ನಾ ಪಾಲಿಸಯ್ಯಾ

ಆದ್ರಿಯ ಮಳೆಬಂದು ಭೂಲೋಕದ ಕೆರೆತುಂಬಿ ಅಕ್ಕ
ನಾಣ್ಯವೂ ನೆನೆದವೋ ಗಂಗೆನಾ ಪಾಲಿಸಯ್ಯಾ ಗಂಗೆನಾ
ಪಾಲಿಸೋ ಶಿವನೇ ನಾರಾಯಣ ಗಂಗಮ್ಮ ನಾ ಪಾಸಿಯ್ಯಾ

ಅಕ್ಕಾನ ನಾಣ್ಯವೂ ನೆನೆದೇವು ಮಡಿವಾಳ ನೋಡಿ
ಸೆಳೆಯಿಯ್ಯಾ ಗಂಗೆನಾ ಪಾಲಿಸಯ್ಯಾ ಶಿವನೇ ನಾರಾಯಣ
ಗಂಗಮ್ಮ ನಾ ಪಾಲಿಸೋ

ಉತ್ರಿಯಾ ಮಳೆಬಂದು ಭೂಲೋಕದ ಕೆರೆತುಂಬಿ ಸ್ವಾಮಿ
ನಾಣ್ಯಾವೂ ನೆನೆದೇವು ಗಂಗೆನಾ ಪಾಲಿಸೋ ಶಿವನೇ ನಾರಾಯಣ
ಗಂಗೆಮ್ಮ ನಾ ಪಾಲಿಸಯ್ಯಾ

ಸ್ವಾಮೀಯ ನಾಣ್ಯವು ನೆನೆದೇವು ಮಡಿವಾಳ ನೋಡಿ
ಸೆಳೆಯಯ್ಯಾ ಗಂಗೆನಾ ಪಾಲಿಸೋ ಶಿವನೇ ನಾರಾಯಣ
ಗಂಗಮ್ಮ ನಾ ಪಾಲಿಸಯ್ಯಾ

ಹಳ್ಳೀಯ ನೀರಿಗೆ ತೆಳ್ಳನ್ನ ಕಲ್ಲಿಗೆ ಸಲಸಲ್ಲಿ ಬೀಳುವ
ಬೀಸಲಿಗೆ ಗಂಗೆನಾ ಪಾಲಿಸೋ ಶಿವನೇ ನಾರಾಯಣ
ಗಂಗಮ್ಮ ನಾ ಪಾಲಿಸಯ್ಯಾ

ಸಲ ಸಲ್ಲ ಬಡವ ಬಿಸಿಲಿಗೆ ಸಿದ್ಧಯ್ಯನ ಪಟ್ಟವೋ
ಪಟವೋಳಿ ಓಣಗಾವೆ ಗಂಗೇನಾ ಪಾಲಿಸೋ ಶಿವನೇ
ನಾರಾಯಣ ಗಂಗಮ್ಮ ನಾ ಪಾಲಿಸಯ್ಯಾ

ಬುಟ್ಟನ್ನ ಕಲ್ಲೀಗೆ ಕಟ್ಟೇಯ ನೀರಿಗೆ ಬಿಸಿ ಬಿಸಿ ಬಡವ
ಬಿಸಿಲಿಗೆ ಗಂಗೇನಾ ಪಾಲಿಸೋ ಶಿವನೇ ನಾರಾಯಣಾ
ಗಂಗಮ್ಮ ನಾ ಪಾಲಿಸಯ್ಯಾ

ಬಿಸಿ ಬಿಸಿ ಬಡವ ಬಿಸಿಲಿಗೆ ತುಪ್ಪದಮ್ಮನ ಕಾವಿ ಕಾಂಡ್ಲ
ಓಣಗೇವಾ ಗಂಗೇನಾ ಪಾಲಿಸೋ ಶಿವನೇ ನಾರಾಯಣಾ
ಗಂಗಮ್ಮ ನಾ ಪಾಲಿಸಯ್ಯಾ.

## ''ಜಲ ಜಲದು ಜೆವತನಲ್ಲ ಸಿದ್ಧಯ್ಯಾ''

ಜಲಜಲದು ಜೆವೆತನಾಲ್ಲಾ ಸಿದ್ದಯ್ಯಾ ಜಲದ ಬಿಟ್ಟು ಬರವೆ ನಲ್ಲಾ
ಸ್ವಾಮೀನ ಸಿದ್ದಯ್ಯ ಗಂಗೆಗೋವಾಗ ಗಂಭೀರ ಕಾಣೋ
ಮಡಿವಾಳ ಜಲಜಲಯ ಜೆವೆತನಲ್ಲಾ ಸಿದ್ದಯ್ಯ
ಜಲದ ಬಿಟ್ಟು ಬರುವನಲ್ಲ.

ಗಂಭೀರ ಕಾಣೋ ಮಡಿವಾಳ ಮೊಳಕಾಲ್ಮೂರು ಬೇಗನೇ ತಾರೋ
ನಡೆಮೂಡಿ ಜಲಜಲದು ಜೆವೆತನಲ್ಲಾ ಸಿದ್ದಯ್ಯ ಜಲದ
ಬಿಟ್ಟು ಬರುವನಲ್ಲ

ಬಾಜು ಬಾಜೂ ಬಿಡಿರೋ ನನ್ನ ಗುರುವಿಗೆ ಜಲಜಲದು
ಬೆವತನಲ್ಲಾ ಜಲದು ಬಿಟ್ಟು ಬರುವನಲ್ಲ ಸಿದ್ದಯ್ಯ
ಜಲದ ಬಿಟ್ಟು ಬರುವನಲ್ಲ

ಬಾಜೀನ ಬಿಡು ನನ್ನ ಗುರುವು ಸಿದ್ಧಯ್ಯಾಗೆ
ಬಂಗಾರದ ಲಿಂಗ ತೋಳುವಾಗೆ  ಜಲಜಲದು ಬೆವೆತನಲ್ಲಾ
ಜಲದು ಬಿಟ್ಟು ಬರವನಲ್ಲಾ

ಹಣ್ಣೆ ನಂಗೆ  ತುಂಬಿರುವ ಗಂಗಮ್ಮ ಇಂಬು ಬಿಡು ನನ್ನ
ಗುರುವಿಗೆ ಜಲಜಲದು ಬೆವೆತನಲ್ಲಾ ಸಿದ್ದಯ್ಯಾ
ಜಲದ ಬಿಟ್ಟು ಬರವನಲ್ಲ

ಇಂಬು ಬಿಡುನನ್ನ ಗುರುವಿಗೆ ಸಿದ್ದಯ್ಯಗೆ ಬೆಳ್ಳೀಯ
ಪಾದ ತೋಳುವಾಗೆ ಜಲಜಲದು ಬೆವೆತನಲ್ಲಾ ಸಿದ್ದಯ್ಯಾ
ಜಲದು ಬಿಟ್ಟು ಬರವನಲ್ಲಾ

ಬಾಗೀನ ತೆರವ್ವೆರ ಬಾಗುದಲೆ ಕರಿವ್ವೆರಿ ಬಾಳೀಯಲಣ್ಣಾ
ತೆರವ್ವೆರಿ ಜಲ ಜಲದು ಬೆವತನಲ್ಲಾ ಸಿದ್ದಯ್ಯಾ
ಜಲದು ಬಿಟ್ಟು ಬರವನಲ್ಲ

ಬಾಳೀಯನ್ನ  ಅನ್ನ ಕರಿ ವ್ವೆರಿ ಬಾಲೇರಿ ಗಂಗೆಗೆ ಸಿದ್ದಯ್ಯ
ಬರುತಾನೆ ಜಲ ಜಲದು ಬೆವತನಲ್ಲಾ ಸಿದ್ದಯ್ಯ
ಜಲದ  ಬಿಟ್ಟು ಬರುವನಲ್ಲ.

ತುಂಬೇನೆ ತೆರೆವ್ವೆರಿ ತುಂಬುದಲೆ ತೆರೆವ್ವೆರಿ ನಿಂಬೀವಲಣ್ಣಾ
ತೆರವ್ವೆರಿ ಜಲಜಲದು ಬೆವತನಲ್ಲ ಸಿದ್ದಯ್ಯ ಜಲದು
ಬಿಟ್ಟು ಬರುವನಲ್ಲಾ

ನಿಂಬೇವನ್ನ ಅನ್ನ ತೆರವ್ವೆರಿ ರಂಗೇರಿ  ಗಂಗೆಸಿದ್ದಯ್ಯ
ಬರುತ್ತಾನೆ ಜಲ ಜಲದು ಬೆವತನಲ್ಲ ಸಿದ್ದಯ್ಯ
ಜಲದ ಬಿಟ್ಟು ಬರುವನಲ್ಲಾ

ಗುಡಿಯ ಬಿಟ್ಟು ಸಿದ್ದಯ್ಯ ಗಂಗೆ ಗೋಗುವಾಗ
ದೊಡ್ಡಾಲವ ಮಕವಾ ನಡುಗೇವಾ ಜಲ ಜಲದು
ಬೆವೆತನಲ್ಲಾ ಸಿದ್ದಯ್ಯ ಜಲದ ಬಿಟ್ಟು ಬರುವನಲ್ಲಾ

ದೊಡ್ಡಾಲದ ಮರವಾ ನಡುಗೇವಾ ಗುಡ್ಡದ
ಸಿದ್ದಯ್ಯಾ ಗಂಗೆಗೋಗುಲವಾಗ ಜಲ ಜಲದು
ಬೆವತನಲ್ಲಾ ಸಿದ್ಧಯ್ಯ ಜಲದ ಬಿಟ್ಟು ಬರುವನಲ್ಲಾ

ಮಠವು ಬಿಟ್ಟು ಸಿದ್ಧಯ್ಯ ಗಂಗೆಗೋಗುಲವಾಗ
ಹಿಂದೇಲೆ ಮರಗಳೂ ತೀರಿಗೇವೆ ಜಲ ಜಲದು
ಬೆವತನಲ್ಲಾ ಸಿದ್ದಯ್ಯ ಜಲದು ಬಿಟ್ಟು ಬರುವನಲ್ಲಾ

ಎತ್ತಲಿಂದೆತ್ತ ತಿರಿಗೇವ ಮಠಗಳು ಸಿದ್ದಯ್ಯ
ಮಠವು ಬಿಟ್ಟು ಗಂಗೆಗೋಗುವಾಗ ಜಲಜಲದು
ಬೆವತನಲ್ಲಾ ಸಿದ್ಧಯ್ಯಾ ಜಲದ ಬಿಟ್ಟು ಬರುವನಲ್ಲಾ

ಸ್ವಾಮಿ ನಿನ್ನ ಕೂದಲಿಗೆ ಹಾಲದ ಸೀಗೆ ಕಾಯಿ
ನಲವತ್ತು ಕೊಡ ನಾ ಮಜ್ಜಿನ ನೀರು ಜಲ ಜಲದು
ಬೆವತನಲ್ಲಾ ಸಿದ್ದಯ್ಯ ಜಲದು ಬಿಟ್ಟು ಬರುವನಲ್ಲಾ

ನಲವತ್ತು ಕೊಡನಾ ಮಜ್ಜನ ನೀರು ಕಾದಾವೇ
ಸ್ವಾಮಿ ನಿಮ ಮಂಡೆ ತೊಳೆ ಬನ್ನಿ ಜಲ ಜಲದು
ಬೆವತನಲ್ಲಾ ಸಿದ್ದಯ್ಯ ಜಲದ ಬಿಟ್ಟು ಬಂದವನಲ್ಲ

ಅಪ್ಪಾ ನಿನ್ನ ಕೂದಲಿಗೆ ಹಾಲು ಸೀಗೆಕಾಯಿ
ನಲವತ್ತು ಕೊಡ ಬಿಸಿನೀರು ಜಲ ಜಲದು
ಬೆವತನಲ್ಲಾ ಸಿದ್ದಯ್ಯ ಜಲದ ಬಿಟ್ಟು ಬರುವನಲ್ಲ

ಮಂಡಿಗಳಾ ತೊಳೆದಾನ ಹಿಂಬಾಗ ನಿಂತಾನೆ
ಗಂಧ ಧರಿಸೀನ್ಯಾ ಮಯ್ಯ ತುಂಬ ಜಲ ಜಲದು
ಬೆವತನಾಲ್ಲ ಸಿದ್ದಯ್ಯ ಜಲದು ಬಿಟ್ಟು ಬರುವನಲ್ಲಾ

ತಣ್ಣೀರಾ ತೊಯ್ದಾನಾ ಬಣ್ಣ ಹೊಯ್ದಾನಾ ವಿಭೂತಿ
ಧರಿಸ್ಯಾನಾ ಮೈಯ ತುಂಬ ಜಲ ಜಲದು
ಬೆವತನಲ್ಲಾ ಸಿದ್ದಯ್ಯ ಜಲದ ಬಿಟ್ಟು ಬರುವನಲ್ಲಾ

ಗಂಗೆ ಬಿಟ್ಟು ಬರುವಾಗ ಸಿದ್ದಯ್ಯ ಮಲ್ಲಿಗೆ ಮೊಗ್ಗು
ಅರಳ್ಯಾವೇ ಜಲ ಜಲದು ಬೆವತನಲ್ಲಾ
ಸಿದ್ದಯ್ಯಾ ಜಲದು ಬಿಟ್ಟು ಬರುವ ನಲ್ಲಾ

# ''ಬಿಲ್ಲಿಡಿದು ಬೇಟೆಯಾಡಿದ ಸಿದ್ಧಯ್ಯ''

ಬಿಲ್ಲಿಡಿದು ಬೇಟೆಯಾಡಿದ ಸಿದ್ದಯ್ಯ ಕಲ್ಲೆತ್ತಿ ದನಿತೋರಿದ
ಅಂಗೈಲಾರುತಿ ಇಡಿದವ್ನೆ ಸಿದ್ದಯ್ಯ ಅಂದದಾರುತಿ ಬೆಳಗೇನೆ
ಬಿಲ್ಲಿಡಿದು ಬ್ಯಾಟಾಡಿದ ಸಿದ್ಧಯ್ಯ ಕಲ್ಲೆತ್ತಿ ದನಿತೋರಿದ

ಸುಗ್ಗೀಲಸ್ನು ಗೂ ಮಗ್ಗಿ ಮಗ್ಗಿ ಹೂ ಕೊಯಿರೆ ಹೆಗ್ಗಣ್ಣೇಶ್ವರಗೇ ಈವ ವೈರಿ
ಬಿಲ್ಲಿಡಿದು ಬ್ಯಾಟಾಡಿದ ಸಿದ್ಧಯ್ಯ ಕಲ್ಲೆತ್ತಿ ದನಿ ತೋರಿದ

ಹೆಗ್ಗಣ್ಣೇಶ್ವರನಿಗೆ ಇವನಿಗೆ ದಮುದನಿಯ ಕಂಬದಲಿ ಬರಲಿ ಶೋಭಿಶಾಲಿ
ಬಿಲ್ಲಿಡಿದು ಬ್ಯಾಟಾಡಿದ ಸಿದ್ಧಯ್ಯ ಕಲ್ಲೆತ್ತಿ ದನಿ ತೋರಿದ

ಕಣಿಗೇಲನ್ನಾ ಹೂವ ಗೊಣಿ ಗೊಣಿಗೆ  ಹೂವ ಕೊಯಿರಿ
ಕಡಿಯೀರನ್ನ ಗೀವ ವೈರಿ
ಬಿಲ್ಲಿಡಿದು ಬ್ಯಾಟಾಡಿದ ಸಿದ್ಧಯ್ಯ ಕಲ್ಲೆತ್ತಿ ದನಿತೋರಿದ
ಕಡಿಯೀಲರಣ್ಣ ಇವಾಗೆ ಕಂಬಲಿ ಬರಲೀ ಗೀವ ವೈರಿ
ಬಿಲ್ಲಿಡಿದು ಬ್ಯಾಟಾಡಿದ ಸಿದ್ಧಯ್ಯ ಕಲ್ಲೆತ್ತಿ ದನಿತೋರಿದ

ಹತ್ತಾನೆ ಹೊತ್ತಾನೆ ಹೊತ್ತುಗಳು ನೋಡ್ಯಾನಾ  ಹತ್ತಾಗೂವತ್ತಾ
ಬಿಲ್ಲುಡಿದು ಬ್ಯಾಟಾಡಿದ ಸಿದ್ಧಯ್ಯ ಕಲ್ಲೆತ್ತಿ ದನಿತೋರಿದ

ಅಪ್ಪಾಗೆ ಹೂವೆತ್ತ ಹೊರಟಾನೆ ತಿಪ್ಪಣ್ಣ ಮೂರುಕೊಂದೆಜ್ಜೆ ಹಾಕುತಾನೆ
ಬಿಲ್ಲುಡಿದು ಬ್ಯಾಟಾಡಿದ ಸಿದ್ಧಯ್ಯ ಕಲ್ಲೆತ್ತಿ ದನಿತೋರಿದ

ಪರಿಗಳ  ಪರ್ರ್ಯಾನೆ ವೀಳ್ಯಾವ ನೋಡ್ಯಾನಾ ಮೂರಕೊಂದೆಜ್ಜೆ
ಬಿಲ್ಲಿಡಿದು ಬ್ಯಾಟಾಡಿದ  ಕಲ್ಲೆತ್ತಿ ದನಿತೋರಿದ

ಮೂರುಕೊಂದೆಜ್ಜೆ ಇಡುತಾನೆ ಸ್ವಾಮಿ ಕರಿಯಣ್ಣ ಸಾಮಿಯತ್ತಾ ಹೊರಟಾನೆ
ಬಿಲ್ಲಿಡಿದು ಬ್ಯಾಟಾಡಿಸಿದ ಸಿದ್ಧಯ್ಯ ಕಲ್ಲೆತ್ತಿ ದನಿತೋರಿದ

ಅಲ್ಲೀ ಇಲ್ಲೀ ಹೂ ಉಲ್ಲಾಳೆ ತುಪ್ಪದಮ್ಮ ಅಲ್ಲಿ ದೇವರ ಗುಡ್ಡ ಒಂದೋಳಗೇಲಿ
ಬಿಲ್ಲಿಡಿದು ಬ್ಯಾಟಾಡಿದ ಸಿದ್ದಯ್ಯ ಕಲ್ಲೆತ್ತಿ ದನಿತೋರಿದ

ಅಲ್ಲಿ ದೇವರ ಗುಡ್ಡ ಒಣಗಿದ ಕಣಿಗೀಲೆ ಎಲೆಗೂ ಮಲ್ಲಿಗೆ ಸರವೊಂದು
ಮುಡಿದಾಳೆ ತುಪ್ಪದಮ್ಮ ಬಿಲ್ಲಿಡಿದು ಬ್ಯಾಟಾಡಿದ ಸಿದ್ದಯ್ಯ ಕಲ್ಲೆತ್ತಿ ದನಿತೋರಿದ

ಅತ್ತಲಿತ್ತಲಿಗೂ ಒಪ್ಪುವನೆ ಸಿದ್ಧಯ್ಯ ಮತಿದೇವರಗುಡ್ಡ
ಒಂದೋಳಿಗೇಲಿ ಬಿಲ್ಲಿಡಿದು ಬ್ಯಾಟಾಡಿದ ಸಿದ್ದಯ್ಯ ಕಲ್ಲೆತ್ತಿ ದನಿತೋರಿದ

ಮತ್ತೆ ದೇವರಗುಡ್ಡ ಅದರೊಳಗೆ ಕನೇಗೇಲಾ ಹೂ ಮುತ್ತಿನ
ಸರವೊಂದು ಮುಡಿದಾನೆ
ಬಿಲ್ಲುಹಿಡಿದು ಬ್ಯಾಟ್ಯಾಡಿದ ಸಿದ್ದಯ್ಯ ಕಲ್ಲೆತ್ತಿ ದನಿತೋರಿದ

## ''ಲಿಂಗ ಜಂಗಮು ಕಣೋ ಸಿದ್ಧಯ್ಯ''

ಗಲ್ಲು ಗಲ್ಲು ಎಂಬುತಾನೆ ಸಿದ್ಧಯ್ಯ ನಿಲ್ಲೆಂದು ರೋಗುತಾನೆ
ಹತ್ತೇನ ಕಾಲೀನ ನೆತ್ತಿೀಗಾಕಿಕೊಂಡು ಒಪದಿಂದಲುವ್ವೇ
ಮುಡಿಸಯ್ಯಾ ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮು ಕಣೋ

ಒಪ್ಪಂದಿದ ಹೂವಾ ಮುಡಿಸೆ ಮೊಳಕಾಲ್ಮುರು ಗೌಡರು
ನೋಡಲು ಬರುತ್ತಾರೆ ಮೂಗಳ ಮಹಿಮೆ ಕಾಣೋ ಸಿದ್ದಯ್ಯ
ಲಿಂಗ ಜಂಗಮು ಕಾಣೋ

ಆರೇನ ಕಾಲೇನ ನೆತ್ತೀಗೆ ಕರಿಮಣಿ ಹಾಕಿಕೊಂಡು
ಒಪದಿಂದ ಲುವ್ವೇ ಮುಡಿಸಯ್ಯಾ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ಮೋಹದಿಂದ ನೀ ಹೂ ಮುಡಿಸು ನಾಗೋಲ್ಲ ಗೌಡರು
ನೋಡಲು ಬರುತ್ತಾರೆ ಮಂಗಳ ಮಹಿಮೆ ಕಾಣೋ
ಸಿದ್ದಯ್ಯ ಲಿಂಗ ಜಂಗಮು ಕಾಣೋ

ಹೆಚ್ಚ ಮಲ್ಲಿಗೆ ಪೂಜೆ ಒಪ್ಪಲಿಲ್ಲ ಮತ್ತೊಬ್ಬ ಜಾರಿ
ಸುಡಿದಾನೆ ಮಂಗಳ ಮಹಿಮೆ ಕಾಸೋ
ಸಿದ್ದಯ್ಯ ಲಿಂಗ ಜಂಗಮು ಕಾಣೋ

ಅತ್ತಲೊಬ್ಬ ಜಾಣ ನುಡಿದಾನೆ ಸುಂಕಣ್ಣ
ಸಲ್ಲಿಕಟ್ಟಯ್ಯಾ ಹೊಸ ಪೂಜೆ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ಸಣ್ಣ ಮಲ್ಲಿಗೆ ಪೂಜೆ ಸಾಲಾದಿಲ್ಲವಂತೆ
ಇನ್ನೊಬ್ಬ ಜಾಣ ನುಡಿದಾನೆ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ಇನ್ನೊಬ್ಬ ಜಾಣ ನುಡಿದಾನೆ ಪಾಲಣ್ಣ
ಸಲ್ಲಿ ಕಟ್ಟಯ್ಯಾ ಹೊಸಪೂಜೆ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ಒಂದು ಹೂವಿನ ಮೇಲೆ ಇನ್ನೊಂದು ಹೂ
ಏರಿಸ್ಯಾರೇ ತುಂಬಿದ ಹೂ ತುದಿಗಿಟ್ಟು
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ತುಂಬಿದ ಹೂ ತುದಿಗಿಟ್ಟು ಸಿದ್ದಯ್ಯ
ಚಂಡವಾಗಿರಸ್ಯಾನೇ ಹೊಸಪೂಜೆ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ಎರಡು ಹೂವಿನ ಮೇಲೆ ಮೂರೇ ಹೂವೆ
ಏರಿಸೀ ಅಂದವಾದ ಹೂವೇ ತುದಿಗಿಟ್ಟು
ಮಂಗಳ ಮಹಿಮೆ ಕಾಣೋ ಸಿದ್ದಯ್ಯಲಿಂಗ ಜಂಗಮಾಕಾಣೋ

ಅಂದವಾದ ಹೂವೂ ತುದಿಗಿಟ್ಟು ಬೋರಣ್ಣಾ
ಚೆಲುವಾಗಿ ಇರಿಸ್ಯಾನೇ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ಸಣ್ಣ ಮಲ್ಲಿಗೆ ಪೂಜೆ ಚಂದವಾಗಿರಿಸಯ್ಯಾ
ರೈತರು ನೋಡಾಲು ಬರುತ್ತಾರೆ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ರೈತಾರು ನೋಡಲು ಬರುತಾರೆ ಮೊಳಕಾಲ್ಮೂರೂ
ಕೊಡುತ್ತಾರೆ ಒಂದು ಕಾಯಿ ಹಣ್ಣಾ ಸ್ವಾಮೀಗೆ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ದುಂಡು ಮಲ್ಲಿಗೆ  ಪೂಜೆ ಚಂದವಾಗಿ ಇಳಿಸಯ್ಯಾ
ಗೌಡರು ನೋಡಲು ಬರುತಾರೆ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ಗೌಡರು ನೋಡಲು ಬರುತಾರೆ ತಿಪ್ಪೇಸ್ವಾಮಿ
ಕೊಡವೊಂದರ ಕೊರಳು ಸುರಿದಾಳು
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ದೇವರ ಹೊರಿಸ್ಯಾರಾ ವೀರಕುಮಾರಗೇ
ನಾಗಕ್ಕಳಡೆದಾ ಮಗನಿಗೆ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ನಾಗಕ್ಕಳಡೆದಾ ಮಗನ ಕರಿಯಜ್ಜಾಗೆ
ದೇವರ ಹೊರಿಸ್ಯಾರೇ ಹಿರಿಯಾರು
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ಪಾಲೀಕೆ ಹೊರಿಸ್ಯಾರೇ ವೀರ ಕುಮಾರನಿಗೇ
ನಾಗಕ್ಕಳಡದಾ ಮಗ ವೀರ ಕುಮಾರಗೇ
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

ನಾಗಕ್ಕಳಡೆದಾ ಮಗನ ಕರಿಯಜ್ಜಾಗೆ
ಪಾಲೀಕೆ ಹೊರಿಸ್ಯಾರೇ ಗೌಡರು
ಮಂಗಳ ಮಹಿಮೆ ಕಾಣೋ ಸಿದ್ದಯ್ಯ ಲಿಂಗ ಜಂಗಮಾಕಾಣೋ

## ''ಕಾಯೀ ಧರಿಸೇ''

ಕಾಯಿಧರಿಸೇ ಕೈಲಾಸದಾ ಸ್ವಾಮಿ ಬಂದಾ ॥
ನಾಗುಳುದನ್ನಾ ಗಂಟೆನೋಡೆ ಬುಜಗಂಬನಾರೀ
ಸಾಂತವ್ವಾ ಮಗಾಜಾಣಾ
ಕಾಯಿ ಧರಿಸೇ ಕೈಲಾಸದ್ದಾ ಸ್ವಾಮಿ ಬಂದಾ

ನಾರಿ ಸಾಂತವ್ವಾ  ಮಗ ಜಾಣ ತಿಪ್ಪಣ್ಣಾ
ನೋಡಿ ತೂಗ್ಯಾನೆ ಶಿವ ಘಂಟೆ
ಕಾಯಿ ಧರಿಸೇ ಕೈಲಾಸದಾ ಸ್ವಾಮಿ ಬಂದಾ

ಒಕ್ಕಳುದನ್ನಾ ಘಂಟೆ ಒಕ್ಕಿ ಬುಜ ಗಂಭಾನೇ
ಅಕ್ಕನಾಗಮ್ಮ ನಾ ಮಗ ಜಾಣ
ಕಾಯಿ ಧರಿಸೇ ಕೈಲಾಸದಾ ಸ್ವಾಮಿ ಬಂದಾ

ಅಕ್ಕ ನಾಗಮ್ಮ ನ ಮಗ ಜಾಣ
ಚಂದ್ರಣ್ಣ ಹೊಕ್ಕಿ ತೂಗ್ಯಾನೆ ಶಿವ ಘಂಟೆ
ಕಾಯೀ ಧರಿಸೇ ಕೈಲಾಸದಾ ಸ್ವಾಮಿ ಬಂದಾ.

## ''ಕರ್ಪೂರದಮ್ಮನ ಹತ್ತಿರ ಹೂ ಕೇಳುವುದು''

ಸರದಾಕನ್ನೆ ಗುಣ ಸಂಪನ್ನೆ ಸೆರೆಗೊಡ್ಡಿ ಬೇಡುವೆ
ಹೂವ ಕೊಡೆ ತಾಯಿ ಶಿರಬಾಗಿ ಬೇಡುವೆನು ಒಂದೂವೆ ಕೊಡೆ
ತಲೆಯಲ್ಲಿ ರಾಗುಟ ಮುಡಿಯುತ ಮಲ್ಲಿಗೆ ಮುತ್ತೈದೆ
ತನವಾ ಒಂದೂವ ಕೊಡೆ ದೇವಿ ಮುತ್ತೈದೆ ತನವೇ
ಒಂದು ಹೂವ ಕೊಡೆ

ಸರಾದಾ ಕನ್ಯೆ ಗುಣ ಸಂಪನ್ನೆ ಸೊರಗೊಡ್ಡಿ ಬೇಡುವೆನು ಒಂದು ಹೂವೆ ಕೊಡೆ
ಕೊರಳಲ್ಲಿ ಕರಿಮಣಿ ಹಣೆಯಲ್ಲಿ ಕುಂಕುಮ
ಮೂಗಿನಲ್ಲಿ ಮುಗು ಬಟ್ಟು ಮೂರು ಹತ್ತಿರ ತಾಯಿ
ಸರದಾ ಕನ್ಯೆ ಗುಣ ಸಂಪನ್ನೆ ಸೆರೆಗೊಡ್ಡಿ ಬೇಡುವೆನು
ಒಂದು ಹೂವೇ ಕೊಡೆ

## ''ಜಯ ಮಂಗಲಂ ನಿತ್ಯ ಶುಭ ಮಂಗಳಂ''

ವಸ್ತ್ರಾವ ತಾಗೊಂಡು ಪತ್ರಿಗೆ ನಾ ಹೋದೆ
ಪತ್ರಿಯೊಳಗೆ ಸರ್ಪ ಮಲಗಿದ್ದವೋ॥
ಪತ್ರಿಯೊಳಗೆ ಸರ್ಪ ಮಲಗಿದ್ದು ದೇವರ ಗುಡ್ಡ ಸಿದ್ದಯ್ಯ
ಪೂಜೆ ಮುಗಿದಿದ್ದವಾ ಜಯ ಮಂಗಳ ನಿತ್ಯ ಶುಭ ಮಂಗಲಾ

ಗೀಡೀಯ ತಗೊಂಡು ಗಂಗೇಗೆ ನಾ ಹೋದೆ
ಗಂಗೆಯೊಳಗೆ ಮೀನು ಮಲಗಿದ್ದವೋ ॥
ಗಂಗೆಯೊಳಗೆ ಮೀನು ಮಲಗಿದ್ದು ತುಪ್ಪದಮ್ಮನ
ಪೂಜೆ ಮುಗಿದಿದ್ದವೇ ಜಯ ಮಂಗಳಂ ನಿತ್ಯ ಶುಭ ಮಂಗಳ

ತಾಲೀಯ ತಗೊಂಡು ಹಾಲೀಗೆ ನಾ ಹೋದೆ ಹಾಲಿನೊಳಗೆ
ಸರ್ಪ ಮಲಗಿದ್ದವೇ ॥ ಹಾಲಿನೊಳಗೆ ಸರ್ಪ ಮಲಗಿದ್ದು
ದೇವ ಗುಡ್ಡ ಸಿದ್ದಯ್ನ ಪೂಜೆ ಮುಗಿದಿದ್ದವೋ
ಜಯ ಮಂಗಳಂ ನಿತ್ಯ ಶುಭ ಮಂಗಳಂ

ಅಕ್ಕೈಯ್ಯಲಾರುತಿ ಈ ಕೈಯ್ಯಲ ಶಿವ ಘಂಟೇ ಲೋಕಾದ್ರಿ
ಕದವ ತೆಗೆಎನ್ನತಾ ॥ ಲೋಕಾದ್ರಿ ಕದವ ತೆಗೆ ಎನ್ನತಾ
ತುಪ್ಪದಮ್ಮನ ಮುತ್ತಿನಾರತಿ ಒಂದು ಹೊರಗೈದವಾ
ಜಯ ಮಂಗಳಂ ನಿತ್ಯ ಶುಭ ಮಂಗಳಂ

ಅಂಗಯ್ಯಲಾರುತಿ ಮುಂಗೈಯ್ಲಿ ಶಿವ ಘಂಟೆ ರಂಗಯ್ಯನೀ
ಕದವ ತೆಗೆಯನುತಾ ॥ ರಂಗಯ್ಯಾ ನೀ ಕದವ ತೆಗೆಯುತಾ
ಸಿದ್ದಯ್ನ ಹೊನ್ನೀ ನಾರುತಿ ಬಂದು ಹೊರ ಗೈದವಾ
ಜಯ ಮಂಗಳಂ ನಿತ್ಯ ಶುಭ ಮಂಗಳಂ

ಹಸಿಯಡಿಕೆ ಸಿಪ್ಪಂತೆ ಹಸಿಯಾ ಬಾಸಿಂಗಂತೆ
ಹಾಸುಮಕ್ಕಳಾ ಗಾರುಳಂತೆ ॥ ಹಾಸು ಮಕ್ಕಳಾ ಗಾರುಳಂತೆ
ಸಿದ್ದಯ್ಗೆ ಮುತ್ತೈದರು ಬಂದು ಆರತಿ ಎತ್ತಿರೇ
ಜಯ ಮಂಗಳಂ ನಿತ್ಯ ಶುಭ ಮಂಗಳಂ

ಬಗ್ಗೀರಿ ಬಗ್ಗೀರಿ ಬಗ್ಗಿ ಶರಣನೆನ್ನೀರಿ ಮೊಗ್ಗುಲಾಗಿರುವ
ನಿಜಬಗುತಾನೆ ॥ ಮೊಗ್ಗುಲಾಗಿರುವ ನಿಜಬಗುತ ಸಿದ್ದಯ್ಗೆ
ಭದ್ರೇರು ಆರುತಿ ತಂದೆತ್ತೀರೀ
ಜಯ ಮಂಗಳಂ ನಿತ್ಯ ಶುಭ ಮಂಗಳಂ

ಅಪ್ಪಾನ ಗುಡಿಮುಂದೆ ಜಾರಿಕೆ ನಿತ್ಯೆಯರು
ನೆರೆಗೆ ಬೀಗದಿಡುರೇ ನಿತ್ಯೆಯರು ನೆರಿಗೆ ಬೀಗದಿಡುರೇ
ಸಿದ್ದಯ್ಯನ ಮುತ್ತಿನಾರುತಿ ಜಾನುತಾವೇ
ಜಯ ಮಂಗಳಂ ನಿತ್ಯ ಶುಭ ಮಂಗಳಂ

ಅಪ್ಪಾನ ಗುಡಿ ಮುಂದೆ ಎಣ್ಣೀನ ಜಾರಿಕೆ ಅಣ್ಣಾನ
ಗುಡಿ ಮುಂದೆ ಎಣ್ಣೀನ ಜಾರಿಕೆ ಕನ್ಯೆಯರು ನೆರಿಗೆ
ಬೀಗದಿಡುರೇ ॥ ಕನ್ಯೆಯರು ನೆರಿಗೆ ಬೀಗದಿಡುರೇ
ತುಪ್ಪದಮ್ಮನ ಹೊನ್ನೀನ ಆರುತಿ ಜಾತುನವೇ
ಜಯ ಮಂಗಳಂ ನಿತ್ಯ ಶುಭ ಮಂಗಳಂ

## ೭.೨.೩. '' ಐತಿಹ್ಯಗಳು''

ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡ ಬಂದ ಪುರಾಣ. ಅಂದರೆ ಹಿಂದೆ ನಡೆದಿರಬಹುದಾದ ಘಟನೆಯೊಂದಕ್ಕೆ ಕಲಾತ್ಮಕತೆಯ ಬಣ್ಣ ಕೊಟ್ಟು ಹೆಣೆದಿರಬಹುದಾದ ಜನಪದ ಸಾಹಿತ್ಯ ಪ್ರಕಾರವಿದು. ಐತಿಹ್ಯಗಳು ಇತಿಹಾಸದ ಸ್ಪರ್ಶದಿಂದ ಕೂಡಿರುತ್ತವೆ. ಜನಪದರು ಕಟ್ಟಿ ನಿರೂಪಿಸುತ್ತಾ ಬಂದಿರುವ ಕಥನಗಳೆನ್ನಬಹುದು. ಇಲ್ಲಿ ಲಿಖಿತ ದಾಖಲೆಗಳಿರುವುದಿಲ್ಲ. ನಿರೂಪಕರಿನಿಂದ ಕೇಳುಗ ಆತನಿಂದ ಪ್ರಸಾರಕರಿಗೆ ಬಾಯಿಂದ ಬಾಯಿಗೆ ಹರಿದುಬರುತ್ತವೆ. ಆದರೆ ಯಾವುದೇ ಆಧಾರವಿಲ್ಲದೆ ಐತಿಹ್ಯ ಹುಟ್ಟಿರಲಾರದು. ಅವಶೇಷ, ಪಳೆಯುಳಿಕೆ, ವಸ್ತು, ವ್ಯಕ್ತಿ, ಘಟನೆ, ಸ್ಥಳ, ಕೆರೆ, ಕಟ್ಟೆ, ಗುಡ್ಡ, ಬೆಟ್ಟ, ನದಿ, ಹಳ್ಳ, ಕಲ್ಲು, ಬಂಡೆ, ಆಯುಧ, ವ್ಯಕ್ತಿ- ಹೀಗೆ ಯಾವುದು ಬೇಕಾದರೂ ಐತಿಹ್ಯಕ್ಕೆ ಒಳಗಾಗಬಹುದು. - ಹೀಗೆ ಭೌತಿಕ ಆಧಾರಗಳ ಹಲವು ವಿಷಯಗಳನ್ನಾಧರಿಸಿ ಆಯಾ ಪರಿಸರದ ಸಂಸ್ಕೃತಿಗನುಸಾರವಾಗಿ ಐತಿಹ್ಯಗಳು ಹುಟ್ಟಿಕೊಂಡಿವೆ. ಇಂತಹ ಐತಿಹ್ಯಗಳು ನಿರೂಪಿಸುವ ನಿರೂಪನ ದೃಷ್ಟಿಯಿಂದ ಒಳಗೊಂಡಿರುತ್ತವೆ.

ಐತಿಹ್ಯ ಕುರಿತು ಜಾನಪದ ತಜ್ಞರು ಮತ್ತು ವಿದ್ವಾಂಸರು ನಿಘಂಟುಕಾರರು ಅರ್ಥೈಸಿರುವುದನ್ನು ಗಮನಿಸಿದಾಗ 'Legend' ಪದಕ್ಕೆ ಸಂವಾದಿಯಾಗಿ ಐತಿಹ್ಯ ಎಂಬ ಪದ ಇತಿಹಾಸದ ' ಇತಿ' 'ಇತಿಹ' ಎನ್ನುವ ಸಂಸ್ಕೃತ ರೂಪದಿಂದ ಬಂದಿರುತ್ತದೆ. ' ಇತಿ' ' ಇತಿಹ' ಎಂಬ ಪದಗಳಿಗೆ ಹೀಗೆ, ಹೀಗೆಯೇ, ಹೀಗಿತ್ತು, ಹೀಗೆ ನಡೆದದ್ದು, ಎಂಬ ಅರ್ಥಗಳು ಇವೆ. ಐತಿಹ್ಯ ಸಹ ಹೀಗೆ ನಡೆದಿರುವ ಸಂಗತಿ ಎಂಬ ಅರ್ಥದಲ್ಲಿ ಐತಿಹ್ಯದ ರೂಪ ಪಡೆದಿದೆ. ಇತಿಹಾಸವೂ ಕೂಡಾ ' ಇತಿ' ' ಇತಿಹ' ಶಬ್ದಗಳನ್ನು ಹೊಂದಿದೆಯಾದರೂ ಅದು ಇಂದು ಚರಿತ್ರೆಯ ಮತ್ತೊಂದು ರೂಪ ಪಡೆದಿದೆ. ಐತಿಹ್ಯವೆಂದರೆ ಪರಂಪರೆಯಿಂದ ಬಂದಿರುವುದು ಪುರಾಣ, ಚರಿತ್ರೆ. ಪ್ರಮಾಣವಿಲ್ಲದೆ ಪರಂಪರೆಯಿಂದ ಬಂದ ಮಾತು ಹೇಳುವುದು. '' ಐತಿಹ್ಯಂ ಇತಿಹಾಸವೆಸವೆನಿಸುಗಂ'' ಎಂಬ ಕನ್ನಡ ಸಾಹಿತ್ಯ ಪರಿಷತ್ ನಿಘಂಟಿನ ಹೇಳಿಕೆಯನ್ನು ಗಮನಿಸಬಹುದಾಗಿದೆ.

ಜಾನಪದ ವಿಶ್ವಕೋಶದಲ್ಲಿ ' ಐತಿಹ್ಯ' ವನ್ನು ಕುರಿತು ಜೆಕೋಬಸ್ ಡಿ.ವೊರಾಜಿನ್‌ನ ಚಿನ್ನದ ಐತಿಹ್ಯದಂತಹ ಜೀವನ ಚರಿತ್ರೆಗಳ ಸಂಗ್ರಹವಾಗಿದೆ. ಅಂದಿನಿಂದ ಐತಿಹ್ಯ ಎಂಬ ಪದವನ್ನು ಒಬ್ಬ ವ್ಯಕ್ತಿ, ಸ್ಥಳ, ಅಥವಾ ಘಟನೆಯನ್ನು ಕುರಿತು ಹೇಳಿದ ವಾಸ್ತವಾಂಶವನ್ನು ಕುರಿತಿದೆ ಎಂದು ಹೇಳಲಾಗುವ ಹಾಗೂ ಸಾಂಪ್ರದಾಯಕ ಅಂಶಗಳನ್ನು ಮೇಳವಿಸಿಕೊಂಡ ಕಥೆಗೆ ಅನ್ವಯಿಸಲಾಗಿದೆ. ಪುರಾಣ ಮತ್ತು ಐತಿಹ್ಯವನ್ನು ಬೇರ್ಪಡಿಸುವ ಗೆರೆ ಎಷ್ಟೋ ವೇಳೆ ಅಸ್ಪಷ್ಟವಾಗಿದೆ ಎಂಬುದಾಗಿ ತಿಳಿದು ಬರುತ್ತದೆ.

ಜಾನಪದದ ಅತಿ ಮುಖ್ಯ ಪ್ರಕಾರಗಳಲ್ಲೊಂದಾದ ಐತಿಹ್ಯವು ವಾಸ್ತವವಾಗಿ ನಡೆದುದೇ ಎಂದು ನಂಬಿಕೊಂಡು ಬಂದಿರುವ ಅಸಮಾನ್ಯ ಘಟನೆಯೊಂದರ ಕಥೆಯೇ ಐತಿಹ್ಯವೆನಿಸುವುದು. ಪ್ರಾಚೀನ ಕಾಲದ ಯಾವುದೇ ಒಂದು ಸಣ್ಣ ಚಾರಿತ್ರಿಕ ಘಟನೆಯ ಸುತ್ತ ಅದ್ಭುತವಾದ ಸನ್ನಿವೇಶಗಳು ಬೆಳೆದು ತಲೆಮಾರುಗಳ ಮೂಲಕ ಹರಿಯುವ ಕಥೆಯಾಗಿ ರೂಪಗೊಂಡರೆ ಅಂತಹುದನ್ನು ಐತಿಹ್ಯವೆನ್ನಲಾಗುತ್ತದೆ ಎಂದು ಕನ್ನಡ ಸಾಹಿತ್ಯ ಕೋಶದಲ್ಲಿ ವಿವರಿಸಿದ್ದಾರೆ. ಇಂತಹುಗಳನ್ನು ಸುಂಕೇಮುಲಿಯಲ್ಲಿಯೂ ಸಹ ಕಾಣಬಹುದು.

# ಐತಿಹ್ಯಗಳು

೧. **ಕುದುರೆ ಹೆಜ್ಜೆಗಳು** : ಶ್ರೀ ಸುಂಕೇಭೈರವನ ಕ್ಷೇತ್ರದಲ್ಲಿ ಮುಗಿಲೆತ್ತರಕ್ಕೆ ನಿಂತಿರುವ ನಿಡಿದಾದ ಕರಿಯ ಬಂಡೆಯ ಈ ಘನ ಘೋರ ಬೆಟ್ಟದ ಮೇಲೆ ಸಾಲಾಗಿ ಕುದುರೆ ಹೆಜ್ಜೆಗಳ ತರಹ ಕಾಣುವ ಗುರುತುಗಳನ್ನು ಕುದುರೆ ಹೆಜ್ಜೆಗಳೆಂದೂ, ಸುಂಕಪ್ಪನು ಈ ಭಾಗದಲ್ಲಿ ತನ್ನ ಮಾಯಾ ಕುದುರೆಯನ್ನು ಹತ್ತಿಸಿದ್ದಾನೆಂದು ಜನಪದರು ನಂಬಿದ್ದಾರೆ. ಆದ್ದರಿಂದ ಇವುಗಳನ್ನು ಕುದುರೆ ಹೆಜ್ಜೆಗಳು ಎಂದು ಕರೆಯುವರು. ಈ ಕುದುರೆ ಹೆಜ್ಜೆಗಳ ಸುತ್ತ ಇರುವ ಐತಿಹ್ಯವನ್ನು, ಗಮನಿಸಿದಾಗ ರಕ್ಕಸರ ಸಂಹಾರಕ್ಕಾಗಿ ಪರಮೇಶ್ವರನ ಬೆವರಿನಿಂದ ಉದ್ಭವಿಸಿದ ಕಾಲಭೈರವನು ಭೂಲೋಕದಲ್ಲಿ ಸಂಚರಿಸುತ್ತಿರುವಾಗ ಈ ಬೆಟ್ಟದಲ್ಲಿ ರಾಕ್ಷಸರುಗಳು ವಾಸಿಸುತ್ತಿವೆ ಎಂದು ಭಕ್ತನಾದ ಹರಳಯ್ಯನ ಮೂಲಕ ತಿಳಿಯುತ್ತವೆ. ಆ ಬೆಟ್ಟದ ಮೇಲೆ ರಾಕ್ಷಸರ ಕೋಲಾಹಲ ಧ್ವನಿ ಕೇಳಿಸುತ್ತದೆ. ಆಗ ಬೆಟ್ಟವನ್ನು ಹತ್ತಿಸುವಾಗ ಮಾರ್ಗ ಮಧ್ಯದಲ್ಲಿ ಕುದುರೆಯ ಲಗಾಮು ಹರಿಯುತ್ತದೆ. ಕುದುರೆಯು ಆರ್ಭಟಿಸುತ್ತಾ ಹಾಹಾಕಾರವನ್ನು ಮಾಡುತ್ತಿರುವಾಗ ಒಂದು ಬಂಡೆಯನ್ನು ಕಿತ್ತು ಕುದುರೆಯನ್ನು ಕಟ್ಟಿಹಾಕಿರುತ್ತಾನೆ. ಇವರು ಹೇಳುವ ಹಾಗೆ ಕುದುರೆಯು ಹಾಹಾಕಾರ ಮಾಡಿರುವ ಗುಂಡಿನ ಡೊಗರನ್ನೂ ಹಾಗೂ ಅನುಕೂಲಕ್ಕಾಗಿ ಕಿತ್ತಿರುವ ಬಂಡೆಯನ್ನು ನೋಡಬಹುದು. ನಂತರ ಪರಮೇಶ್ವರನನ್ನು ಧ್ಯಾನಿಸುತ್ತಾ ಮಲಗಿಕೊಂಡೇ ತನ್ನ ಕಿರುಬೆರಳಿನಿಂದ ಅಲ್ಲಿ ಆಂಜನೇಯನನ್ನು ಬರೆದನೆಂಬುದು ಬೆಟ್ಟದ ತಪ್ಪಲು ಪ್ರದೇಶದಲ್ಲಿ ಹರಳಯ್ಯನು ಕಟ್ಟಿಗೆಗಳನ್ನು ಸಂಗ್ರಹಿಸುತ್ತಿರುವಾಗ ಈತನ ಕಷ್ಟವನ್ನರಿತು ಆಗ ತನ್ನ ಉಂಗುಟದಿಂದ ಹಿಡಿದು ಮೈಯ್ಯ ಚರ್ಮವನ್ನು ಉದ್ದಕ್ಕೆ ಸಿಗಿದು ಲಗಾಮಾಗಿ ಮಾಡಿಕೊಟ್ಟನೆಂದೂ ಹರಳಯ್ಯನ ತ್ಯಾಗವನ್ನು ಮೆಚ್ಚಿದ ಭೈರವನು ಈತನ ಎರಡು ಬೇಡಿಕೆಗಳನ್ನು ಈಡೇರಿಸುವನು. ಅವುಗಳೇನೆಂದರೆ ಆಗಿನ ಕಾಲದಲ್ಲಿ ಜಾತಿಭೇದವಿಲ್ಲದೆ ಎಲ್ಲಾ ಜನಾಂಗದವರೂ ಒಂದೇ ಹೊಂಡದಲ್ಲಿ ನೀರನ್ನು ಬಳಸಬೇಕೆಂಬುದೂ. ಮತ್ತು ಈ ಕ್ಷೇತ್ರದಲ್ಲಿ ಮೊದಲ ಪೂಜೆ ಈತನಿಗೆ ಸಲ್ಲಬೇಕೆಂಬುದು. ಆದ್ದರಿಂದ ಅಂದಿನಿಂದ ಇಂದಿನವರೆಗೂ ಮೊದಲ ಪೂಜೆ ಹರಳಯ್ಯನಿಗೆ ಸಲ್ಲುವ ಹಾಗೆ ಎರಡು ಕಡೆಯಿಂದಲೂ ಬಂದರೂ ಸಹ ಪ್ರವೇಶದಲ್ಲಿ ಈತನ ಗುಡಿಯನ್ನು ನಿರ್ಮಿಸಿರುವುದನ್ನು ಬರುವ ಭಕ್ತರೆಲ್ಲರೂ ಆತನಿಗೆ ಮೊದಲ ಪೂಜೆ ಸಲ್ಲಿಸಿಯೇ ಮುಂದೆ ಹೋಗುವ ವ್ಯವಸ್ಥೆಯಿರುವುದನ್ನು ಗಮನಿಸಬಹುದು. ಇವುಗಳನ್ನು ಮೇಲಿನ ಈರ್ಲು ಮತ್ತು ಕೆಳಗಿನ ಈರ್ಲು ಎಂತಲೂ ಕರೆಯುತ್ತಾರೆ.

ಹೀಗೆ ಹರಳಯ್ಯನ ಸಹಾಯದಿಂದ ಭೈರವನು ಮುಂದೆ ಪ್ರಯಾಣ ಬೆಳಸಿ ಬೆಟ್ಟದ ಮೇಲೆ ರಕ್ಕಸರನ್ನು ಸಂಹರಿಸುತ್ತಾನೆ. ಈ ಹೆಜ್ಜೆಗಳ ಕುರುಹಾಗಿ ಇಂದಿಗೂ ಸಹ ಈತನಿಗೆ ಸಂಬಂಧಿಸಿದ ಸ್ಥಳಗಳಲ್ಲಿ ಈ ಕ್ಷೇತ್ರದಲ್ಲಿ ಕುದುರೆಯ ವಿಗ್ರಹವನ್ನು, ಹಾಗೂ ಭೈರವನು ಕುದುರೆ ಸವಾರಿಮಾಡುವ ವಿಗ್ರಹವನ್ನು ಹಾಗೂ ಜೀವಂತ ಕುದುರೆಯನ್ನು ಸಂರಕ್ಷಣೆ ಮಾಡುವುದನ್ನು ನೋಡಬಹುದು. - ಹೀಗೆ ಈ ಕುದುರೆ ಹೆಜ್ಜೆಗಳ ಸುತ್ತ ಇಂತಹ ಪ್ರಸಂಗಗಳನ್ನು ತಿಳಿದುಕೊಳ್ಳಬಹುದು.

೨. **ಕರ್ಪೂರದಮ್ಮನ ಕಿಂಡಿ** : ಸುಂಕೇಮಲೆ ಭೈರವನ ಅಕ್ಕ ಎಂದು ಕರ್ಪೂರದಮ್ಮ ಅಥವಾ ತುಪ್ಪದಮ್ಮ ಇಲ್ಲಿ ಕಂಡುಬರುತ್ತಾಳೆ. ಈತನ ಕ್ಷೇತ್ರದಲ್ಲಿ ಈ ದೇವಿಯ ದೇವಸ್ಥಾನವೂ ಸಹ ಇದೆ. ಚಿತ್ರದುರ್ಗ ಪಾಳೆಯಗಾರ ಮದಕರಿನಾಯಕನ ಕೋಟೆಯೊಳಗೆ ವೀರವನಿತೆ ಓಬವ್ವನ ಕಿಂಡಿ ಎಂದು ಕರೆಯುತ್ತಾರೆ. ಇದು ಒಂದು ಬಂಡೆಯ ಮಧ್ಯೆ ಪ್ರವೇಶದ ಅನುಕೂಲಕ್ಕಾಗಿ ಹಾದಿ ಮಾಡಿಕೊಂಡು ಹೋಗಿರುವ ಹಾಗೆ ಭಾಸವಾಗುತ್ತದೆ. ಬೆಟ್ಟದತ್ತುವಾಗ

ಅದರ ಮೂಲಕವೇ ಹಾದು ಹೋಗಬೇಕಾಗುತ್ತದೆ. ಇದನ್ನು ಜನರು ಕರ್ಪೂರದಮ್ಮನ ಕಿಂಡಿ ಎಂದು ಕರೆಯುತ್ತಾರೆ. ಇದರ ಕುರುಹಾಗಿ ಈ ಕಿಂಡಿಯ ಕೆಳಗಡೆ ಈಕೆಯ ಎರಡು ಪಾದಗಳಿರುವುದನ್ನು ಹಾಗೂ ಈಕೆಯ ದೇವಸ್ಥಾನದಲ್ಲಿ ಒನಕೆ ಇರುವುದನ್ನು ನೋಡಬಹುದು. ‹ರಕ್ಕಸರ ಉಪಟಳವನ್ನು ಕೊನೆಗಾಣಿಸಲು ಅವತರಿಸಿದ ಕರ್ಪೂರದ ಹಾಗೂ ಭೈರವನು ಭೂಲೋಕ ಮಾರ್ಗವಾಗಿ ಸಂಚರಿಸುತ್ತಿರುವಾಗ ಕುಮತಿ ಎಂಬ ಗ್ರಾಮದ ತಂಪಾದ ಹಳ್ಳದ ದಡದಲ್ಲಿ ಬಿಡಾರ ಬಿಟ್ಟಿರುವಾಗ ಅಲ್ಲಿಂದ ಪೂರ್ವ ದಿಕ್ಕಿನ ಕಡೆ ನುಂಕೇಮಲೆ ಬೆಟ್ಟಗಳು ಭೈರವನಿಗೆ ಘೋರವಾಗಿ ಕಂಡವಂತೆ ಅಕ್ಕನ ಅಪ್ಪಣೆಯನ್ನು ಪಡೆದು ಪ್ರಯಾಣ ಬೆಳೆಸಿದನು. ಅಲ್ಲಿ ಮೇಲುಗಿರಿಯಲ್ಲಿ ರಕ್ಕಸರಿಗೂ ಭೈರವನಿಗೂ ಘನಘೋರವಾದ ಯುದ್ಧ ನಡೆಯುತ್ತಾ ಇತ್ತು ಹೀಗಿರುವಾಗ ತಮ್ಮನ ಕಷ್ಟವನ್ನರಿತ ಕರ್ಪೂರದಮ್ಮನು ಬೇಡರಾದ ಕಾಟಣ್ಣ, ಬೋಸಯ್ಯ ಹಾಗೂ ನೂರಾ ಒಂದು ನಾಯಿಗಳೊಂದಿಗೆ ಅಲ್ಲಿಗೆ ಬರುತ್ತಾಳೆ.

ಯುದ್ಧದ ಸದ್ದು ಗದ್ದಲಗಳು ಕೇಳಿಬರುತ್ತವೆ. ಭಯಗೊಂಡ ಕರ್ಪೂರದ ಕೋಟೆಯೊಳಗೆ ಹೋಗಲು ಹಾದಿಯೇ ಕಾಣದೇ ಸಾಲಾಗಿ ಹೆಬ್ಬಂಡೆಗಳು ಗೋಚರಿಸುತ್ತವೆ. ಆಗ ಆಕೆಯು ತನ್ನ ಒನಕೆಯಿಂದ ಬಂಡೆಯನ್ನು ಒಡೆದು ಹಾದಿಮಾಡಿಕೊಂಡು ಒಳಹೋಗುತ್ತಾಳೆ. ಇದನ್ನೇ ಕರ್ಪೂರದಮ್ಮನ ಕಿಂಡಿ ಎಂದು ಕರೆಯುತ್ತಾರೆ.› ಇಂದಿಗೂ ಅದನ್ನು ಕರ್ಪೂರದಮ್ಮನು ಹಾದಿ ಮಾಡಿಕೊಂಡು ಹೋಗಿರುವ ಮಾರ್ಗವೆಂದು ಜನಪದರು ಹೇಳುತ್ತಾ ಬಂದಿದ್ದಾರೆ.

**೩. ರಾಕ್ಷಸರ ಕಲ್ಲುಗಳು :** ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಕುಮುತಿ ಎಂಬ ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಕೆರೆಯ ಪಕ್ಕದಲ್ಲಿ ಈ ಎರಡು ರಾಕ್ಷಸರ ಕಲ್ಲುಗಳಿವೆ. ಇವು ರಾಕ್ಷಸರುಗಳ ಹಾಗೆಯೇ ರೂಪವನ್ನು ಹೊಂದಿರುತ್ತವೆ. ರಾಕ್ಷಸರುಗಳು ಭೈರವನ ರೂಪವನ್ನು ನೋಡಿ ಹೆದರಿ ಓಡುತ್ತಿರುವಾಗ ಆತನು ಬಾಣಗಳನ್ನು ಬಿಟ್ಟನಂತೆ ಅವು ಕಲ್ಲುಗಳಾದವು ಎಂದು ಜನರು ಹೇಳುತ್ತಾರೆ. ।ಇದರ ಹಿನ್ನೆಲೆಯಾಗಿ ನೋಡಿದಾಗ ಕರ್ಪೂರದಮ್ಮ ಹಾಗೂ ನುಂಕೇ ಮಲೆ ಭೈರವನು ಕುಮುತಿಯ ಬಳಿ ಹಳ್ಳದ ದಡದಲ್ಲಿ ಬೀಡು ಬಿಟ್ಟಿರುವಾಗ ಎಂತಹ ವೈರುದ್ಯಗಳುಳ್ಳ ಪ್ರಾಣಿಗಳೂ ಸಹ ಅನ್ಯೋನ್ಯವಾಗಿ ಕಾಲಕಳೆಯುತ್ತಿದ್ದವು. ನುಂಕೇಮಲೆ ಬೆಟ್ಟದಲ್ಲಿರುವ ರಸಾಸಿದ್ಧನ ವಾಹನವಾದ ಕೋಣಕ್ಕೂ ಬಿಲ್ಲಾಳ ರಾಯನ ವಾಹನ ಟಗರೂ ಇದು ನುಂಕಪ್ಪನ ಹತ್ತಿರವಿತ್ತು. ಇವೆರಡಕ್ಕೂ ಗಾಢವಾದ ಸ್ನೇಹ ಬೆಳೆದಿತ್ತು ಇವೆರಡೂ ರಾತ್ರಿಯಲ್ಲಾ ಮೇದು ಕೊಟ್ಟೂರು ಕೆರೆಯಿಂದ ನೀರು ಕುಡಿದು ಬರುತ್ತಿದ್ದವಂತೆ. ರಾತ್ರಿಯ ವೇಳೆಯಲ್ಲಿ ನಾವಿಬ್ಬರೂ ಕೂಡಲೇಬೇಕೆಂದು ಒಪ್ಪಂದವಾಗಿತ್ತು. ಆಕಸ್ಮಿಕವಾಗಿ ಕೋಣವು ಒಂದು ದಿನ ಬರಲೇ ಇಲ್ಲ. ಟಗರು ಕಾದು ಕಾದು ಬೇಸತ್ತು ಕೋಣವನ್ನು ಗುದ್ದಿ ಸಾಯಿಸಿತು. ನಂತರ ತನ್ನ ಸ್ನೇಹಿತನನ್ನು ಕಳೆದುಕೊಂಡ ಟಗರು ಪಶ್ಚಾತ್ತಾಪ ಪಟ್ಟು ತಾನೂ ಸಹ ಪ್ರಾಣತ್ಯಾಗ ಮಾಡಿತು. ಇವು ಮೂಲತಹ ಗಾಂಧರ್ವ ಕನ್ಯೆಯರು ಯಾವುದೋ ಒಂದು ಮಾಡಿದ ತಪ್ಪಿಗಾಗಿ ಇವರು ಭೂಲೋಕದಲ್ಲಿ ಸ್ವಲ್ಪ ದಿನ ಕೋಣ, ಟಗರುಗಳಾಗಿ ಹುಟ್ಟಿ ನಂತರ ಮರುಜನ್ಮ ಪಡೆಯುತ್ತವೆ. ಇವುಗಳ ಕುರುಹಾಗಿ ಇಂದು ಕೊಟ್ಟೂರು ಬಳಿ ಕೋಣನಹಳ್ಳಿ, ಕುರುಬನಹಳ್ಳಿ - ಎಂಬೆರಡು ಗ್ರಾಮಗಳು. ಕೋಣ ಮತ್ತು ಟಗರು ಇವುಗಳ ವಿಷಯವಾಗಿ ಅಧ್ಯಯನ ಮಾಡಿದಾಗ ಅವುಗಳ ಸಾಕ್ಷಿಗಳೆಂಬಂತೆ ಈ ಎರಡು ಹಳ್ಳಿಗಳನ್ನು ನೋಡಬಹುದು.

ನುಂಕೇಮಲೆಯ ಬೆಟ್ಟದಲ್ಲಿ ವಾಸವಾಗಿದ್ದ ರಸಸಿದ್ಧನು ತನ್ನ ವಾಹನವಾದ ಕೋಣವು ಎರಡು - ಮೂರು ದಿನಗಳಾದರೂ ಬಾರದೇ ಇದ್ದಾಗ ಅದನ್ನು ಹುಡುಕಿ ತರಲು ಇಬ್ಬರು ರಾಕ್ಷಸರುಗಳನ್ನು ಕಳುಹಿಸುತ್ತಾನೆ. ಕುಮುತಿಯ

ಬಳಿ ಬಂದಾಗ ಭೈರವನ ಕಣ್ಣಿಗೆ ಬೀಳುತ್ತಾರೆ. ನಾವು ನರಮಾನವರ ಕಣ್ಣಿಗೆ ಕಾಣುವವರಲ್ಲ ಈತನಾರೋ ದೈವೀಪುರುಷನಿರಬೇಕೆಂದು ತಮ್ಮ ರಕ್ಕಸರ ರಹಸ್ಯ ಎಲ್ಲಿ ಬಯಲಿಗೆ ಬೀಳುವುದೋ ಎಂದು ಭಯಗೊಂಡು ಓಡುತ್ತಿರುವಾಗ ಆಗ ಭೈರವನು ಬಾಣಗಳನ್ನು ಬಿಟ್ಟನು. ಅವು ಅಲ್ಲಿಯೇ ಕಲ್ಲುಗಳಾದವು. ಅಂದಿನಿಂದ ಅವುಗಳನ್ನು ರಕ್ಕಸರ ಕಲ್ಲುಗಳೆಂದು ಕರೆಯುವುದುಂಟು. ಜನರ ನಂಬಿಕೆಯಂತೆ ಮಧ್ಯರಾತ್ರಿಯಲ್ಲಿ ಅವುಗಳಿಗೆ ಅನ್ನವನ್ನು ಹಾಕಿ ಸ್ವಲ್ಪಸಮಯದ ನಂತರ ಬಿಟ್ಟು ನೋಡಿದಾಗ ಹಾಕಿದ ಅನ್ನವು ಮಾಯವಾಗಿರುತ್ತದೆ ಎಂದು ಹೇಳುತ್ತಾರೆ. ಅಲ್ಲಿಯ ಜನರು ಆ ಕಲ್ಲುಗಳ ಹತ್ತಿರ ಹೋಗುವುದಕ್ಕೆ ಹೆದರುತ್ತಾರೆ.

ಕುಮುತಿಯ ಬಳಿ ಭೈರವನ ದೇವಸ್ಥಾನ ಹಾಗೂ ಅದರ ಮುಂದೆ ಕುದುರೆ ಸವಾರಿ ಮಾಡುವ ವಿಗ್ರಹ ಒಂದು ಜೊತೆ ಪಾದಗಳು, ಟಗರಿನ ಚಿತ್ರ ಇವುಗಳನ್ನು ನೋಡಬಹುದು.

**೪. ರಸದೋಣಿ :** ಇದು ನುಂಕೇಮಲೆಯ ಕ್ಷೇತ್ರದ ಮೇಲುಗಿರಿಯಲ್ಲಿದೆ. ಇದನ್ನು ರಸದೋಣಿ ಎಂದು ಕರೆಯುತ್ತಾರೆ. ಹಿಂದಿನ ಕಾಲದಲ್ಲಿ ರಸಾಸಿದ್ಧರೆಂಬ ರಾಕ್ಷಸರು ಈ ದೋಣಿಯಲ್ಲಿ ವಿಷವನ್ನು ಸಂಗ್ರಹಿಸಿತ್ತಿದ್ದರಂತೆ. ಇವರಿಗೆ ವಿಷವೇ ಅಮೃತ ಅಥವಾ ಆಹಾರವಿದ್ದಂತೆ. ಈ ರಸದೋಣಿಯಲ್ಲಿ ಯಾವಾಗಲೂ ಸಹ ಏಳು ಕೊಪ್ಪರಿಗೆ ವಿಷವನ್ನು ಸಂಗ್ರಹಿಸುತ್ತಿದ್ದರು. ಇದರಲ್ಲಿ ಎಷ್ಟೆಷ್ಟು ವಿಷವಿರುತ್ತದೆಯೋ ಅದು ಅವರಿಗೆ ಅಷ್ಟು ರಕ್ಷಣೆ ನೀಡುತ್ತದೆ. ರಸಾಸಿದ್ದ ಮತ್ತು ಅಂಗ್ಸರೆಂಬ ರಕ್ಕಸರು ಅಲ್ಲಿ ಬೆಟ್ಟಗುಡ್ಡಗಳಲ್ಲಿ ದೊರೆಯುವ ಗಿಡಮೂಲಿಕೆಗಳನ್ನು ತಂದು ಭಟ್ಟಿ ಇಳಿಸುವುದರ ಮೂಲಕ ವಿಷವನ್ನು ಸಂಗ್ರಹಿಸುವುದೇ ಅವರ ಮುಖ್ಯ ಕೆಲಸವಾಗಿತ್ತು. ಇದಕ್ಕೆ ಕಾವಲುಗಾರರಾಗಿ ರಸಾಸಿದ್ದನ ತಂಗಿಯರೆಂದು ಹೇಳುವ (ದಾಸಿಯರು) ನುಂಕವ್ವ ಮಲಿಯವ್ವ ಎಂಬುವರು ಇರುತ್ತಿದ್ದರು.

ಇದು ಸುಮಾರು ಆಳವಿದೆ ಈಗ ಅದರ ತುಂಬಾ ನೀರು ತುಂಬಿದೆ. ಈಗ ಆ ನೀರನ್ನು ಕುಡಿಯಲು ಬಳಸುತ್ತಾರೆ. ಹೀಗೆ ನುಂಕವ್ವ, ಮಲಿಯವ್ವ ಈ ವಿಷವನ್ನು ಕಾವಲು ಕಾಯುತ್ತಿರುವ ಸಂದರ್ಭದಲ್ಲಿ ರಕ್ಕಸರನ್ನು ಸಂಹಾರಮಾಡಲೆಂದು ಬಂದ ಕಾಲಭೈರವ ತನ್ನ ಮಹಿಮೆಯಿಂದ ವಿಷವನ್ನೆಲ್ಲಾ ಖಾಲಿ ಮಾಡುತ್ತಾನೆ. ಬಡ ಜೋಗಿಯ ವೇಷವನ್ನು ಧರಿಸಿ ಅವರ ಹತ್ತಿರ ಬಿಕ್ಷೆ ಬೇಡಲು ಹೋಗುತ್ತಾನೆ. ಆಗ ದಾಸಿಯರು ತಮ್ಮಲ್ಲಿ ಆಹಾರವಿಲ್ಲ ವಿಷವೇ ತಮಗೆ ಆಹಾರವೆಂದು ಹೇಳಿದಾಗ ನಿಮಗೆ ಗಂಡನಿಲ್ಲದೆ ಮಕ್ಕಳ ಭಾಗ್ಯ ನೀಡುತ್ತೇನೆ ಎಂದು ಹೇಳಿ ಅವರಲ್ಲಿ ಆಸೆ ಹುಟ್ಟಿಸಿ ತನ್ನ ಮಾಯೆಯಿಂದ ಏಳು ಕೊಪ್ಪರಿಗೆ ವಿಷವನ್ನೆಲ್ಲಾ ಖಾಲಿ ಮಾಡಿ ಮುಂದೆ ರಕ್ಕಸರನ್ನು ಸಂಹಾರ ಮಾಡುತ್ತಾನೆ. ಆದ್ದರಿಂದ ಜನರು ಇದನ್ನು ರಸದೋಣಿ ಎಂತಲೂ ರಾಕ್ಷಸರು ಸಂಗ್ರಹಿಸಿದ ವಿಷವನ್ನು ತುಂಬಿಸುವ ಪಾತ್ರೆಗಳೆಂತಲೂ ಕರೆಯುತ್ತಾರೆ.

**೫. ಮಲಿಯಮ್ಮ :** ತಲೆಮಾತ್ರ ಕಾಣುವ ಮಲಿಯಮ್ಮನ ಮೂರ್ತಿಯಿದೆ. ಜೋಗಿಯ ದೇವಾಲಯದ ಪಕ್ಕದಲ್ಲಿ ಹನುಮಂತರಾಯ. ಈತನ ಪಕ್ಕದಲ್ಲಿ ಈ ವಿಗ್ರಹವಿದೆ. ಭೈರವನು ರಕ್ಕಸರನ್ನೆಲ್ಲಾ ಸಂಹಾರ ಮಾಡಿದ ನಂತರ ತಮಗೂ ಉಳಿಗಾಲವಿಲ್ಲವೆಂದು ಭೂಮಾರ್ಗವಾಗಿ ನುಂಕವ್ವ, ಮಲಿಯವ್ವರು ಇಳಿದು ಹೋಗುವ ಸಂದರ್ಭದಲ್ಲಿ ನೋಡಿದ ನುಂಕಪ್ಪನು ಅವರ ಕೂದಲನ್ನು ಹಿಡಿದು ಮೇಲಕ್ಕೆತ್ತಿದನು ಎಂದು ಇದರ ಸುತ್ತ ಐತಿಹ್ಯವಿದೆ. ರಾಕ್ಷಸರನ್ನೆಲ್ಲಾ ಸಂಹಾರ ಮಾಡಲು ಮೊದಲು ಅವರ ಹತ್ತಿರವಿರುವ ವಿಷವನ್ನು ಖಾಲಿಮಾಡಲು ಒಂದು ಉಪಾಯಮಾಡಿದನು. ಜೋಗಿ ವೇಷವನ್ನು ಧರಿಸಿ ತಂಬೂರಿಯನ್ನು ಹಿಡಿದು ಬಿಕ್ಷೆ ಬೇಡಿದನು. ನುಂಕವ್ವ,

ಮಲಿಯವ್ವ ಇವರ  ಹತ್ತಿರ ಮೋಸದಿಂದ ಏಳು ಕೊಪ್ಪರಿಗೆ ವಿಷವನ್ನೆಲ್ಲಾ ಖಾಲಿ ಮಾಡಿದನು. ಆಗ ಅವರು ಕೇಳಿದರು ಏನು ಸ್ವಾಮಿ ವಿಷವೆಲ್ಲಾ ಖಾಲಿಯಾಗಿ ಹೋಯ್ತು ನಮ್ಮವರು ಬಂದರೆ ನಮ್ಮನ್ನು ಸುಮ್ಮನೆ ಬಿಟ್ಟಾರೆಯೇ ಎಂದಾಗ, ಆಗ ಕಾಲಭೈರವನ ರೂಪತಾಳಿ ಅವರ ಹಣೆಗೆ ವಿಭೂತಿ ಇಟ್ಟು ನಿಮಗೆ ಮುಂದೆ ಒಳ್ಳೆಯದಾಗಲಿ ಎಂದು ರಸಾಸಿದ್ಧ ಅಂಗ್ಸರನ್ನು ಸಂಹಾರ ಮಾಡಿದ. ನಂತರ ಸ್ವಾಮಿಯಿಂದ ನಮಗೂ ಉಳಿಗಾಲವಿಲ್ಲವೆಂದ ಸುಂಕಮ್ಮ ಮತ್ತು ಮಲಿಯವ್ವರು ಭೂಲೋಕಕ್ಕೆ ಇಳಿದು ಹೋಗುವಾಗ ಆತ ವಿಭೂತಿ ಹಚ್ಚಿದ್ದರಿಂದ ಅವರ ದೇಹಗಳೆಲ್ಲಾ ಭೂಮಿಗೆ ಇಳಿದವು. ತಲೆಮಾತ್ರ ಇಳಿಯಲಿಲ್ಲ. ವಿಭೂತಿಯ ಪ್ರಭಾವದಿಂದ ಅವರು ಪೂರ್ತಿಯಾಗಿ ಇಳಿದು ಹೋಗಲು ಸಾಧ್ಯವಾಗಲಿಲ್ಲ. ಹೀಗೆ ಇದರ ಸುತ್ತ ಇಂತಹ ಕಥೆಯನ್ನು ಹೇಳುವ ಮಲಿಯಮ್ಮನ ವಿಗ್ರಹವಿದೆ. ಮೊದಲು ಸುಂಕವ್ವನ ವಿಗ್ರಹವೂ ಸಹ ಇತ್ತು. ಈಗ ಅದು ಕಾಣದಾಗಿದೆ. ಇನ್ನೂ ಕೆಲವರು ಇದನ್ನು ಎಲ್ಲಮ್ಮದೇವಿ ಎಂತಲೂ ಸಹ ಕರೆಯುತ್ತಾರೆ.

೬. **ನಗಾರಿ ಬಂಡೆ :** ಸುಂಕೇಮಲೆಯ ಬೆಟ್ಟದ ಹೊರವಲಯದಲ್ಲಿ ನಗಾರಿ ಬಂಡೆ ಎಂಬುದು ಕಂಡು ಬರುತ್ತದೆ. ಇದು ಸುಮಾರು ೧೦ ಅಡಿ ಎತ್ತರ ೨೫ ಅಡಿಗಳ ಸುತ್ತಳತೆಯನ್ನು ಹೊಂದಿರುತ್ತದೆ. ಇದರ ಮೇಲೆ ಕುಳಿತು ರಕ್ಕಸರು ಶತ್ರುಗಳ ಬರುವಿಕೆಯನ್ನು ಕಂಡುಹಿಡಿಯುತ್ತಿದ್ದರಂತೆ. ತಮ್ಮ ಬೆಟ್ಟಕ್ಕೇನಾದರೂ ಶತ್ರುಗಳು ಪ್ರವೇಶ ಮಾಡಲು ಪ್ರಯತ್ನಿಸಿದರೆ ಆ ನಗಾರಿ ಬಂಡೆಯನ್ನು ಕಾವಲು ಕಾಯುವವರು ಹೊಡೆಯುತ್ತಿದ್ದರಂತೆ. ಆಗ ಬಡೆದ ಶಬ್ದವು ಮೇಲುಗಿರಿಯಲ್ಲಿ ವಾಸಮಾಡುತ್ತಿರುವ ರಕ್ಕಸರಿಗೆ ಕೇಳಿಸಿದಾಗ ಅವರು ಜಾಗೃತರಾಗಿ ಶತ್ರುಗಳನ್ನು ಹಿಮ್ಮೆಟ್ಟಿಸುತ್ತಿದ್ದರಂತೆ. ಇದರ ಕುರುಹಾಗಿ ಇಂದಿಗೂ ಸಹ ಸುಂಕೇಮಲೆಯ ಬೆಟ್ಟದ ಪಶ್ಚಿಮ ದಿಕ್ಕಿನಲ್ಲಿದೆ. ಯಾವಾಗಲೂ ಸಹ ರಸಾಸಿದ್ಧನು ಈ ಸ್ಥಳದಲ್ಲಿ ಕಾವಲುಗಾರರನ್ನು ನೇಮಿಸುತ್ತಿದ್ದನು. ಇತ್ತ ಪಲುಮರಾಜರಿಂದ ರಕ್ಕಸರ ವಿಚಾರವನ್ನು ತಿಳಿದುಕೊಂಡ ಭೈರವನು ಕುಮುತಿಯಿಂದ ಸುಂಕೇಮಲೆಯ ಬೆಟ್ಟದ ಕಡೆಗೆ ತನ್ನ ಮಾಯಾಕುದುರೆಯ ಮೇಲೆ ಬರುತ್ತಾನೆ. ಇದನ್ನು ನೋಡಿದ ರಕ್ಕಸದ ಕಾವಲುಗಾರರು ಮೇಲುಗಿರಿಗೆ ಕೇಳಿಸುವಂತೆ ಈ ನಗಾರಿ ಬಂಡೆಯನ್ನು ಬಡೆಯುತ್ತಿದ್ದರಂತೆ.

೭. **ಪಗಡೆಯಾಟ ಆಡಿದ ಗುರುತುಗಳು :** ನಗಾರಿ ಬಂಡೆಯ ಹಿಂಬಾಗಕ್ಕೆ ಪಗಡೆಯಾಟ ಆಡಿದ ಗುರುತುಗಳು ಕಂಡುಬರುತ್ತವೆ. ಸಿದ್ಧನಾಥ ಬಂಡೆ ಎಂಬಲ್ಲಿ ಭೈರವನಿಗೂ ಮತ್ತು ರಕ್ಕಸರಿಗೂ ಯುದ್ಧ ನಡೆಯುತ್ತದೆ. ಆಗ ಪಶ್ಚಿಮದ ಕಡೆಯಿಂದ ಕರ್ಪೂರದಮ್ಮ, ಕಾಟಣ್ಣನವರು ಬರುತ್ತಾರೆ. ತಮ್ಮ ದಣಿವನ್ನು ನೀಗಿಸಲು ಕರ್ಪೂರದಮ್ಮನೂ ಮತ್ತು ಕಾಟಣ್ಣನೂ ಸೇರಿ ಪಗಡೆಯಾಟ ಆಡುತ್ತಾರಂತೆ ಅದರ ಕುರುಹಾಗಿ ಅಲ್ಲಿ ಪಗಡೆಯಾಟ ಆಡಿದ ಗುರುತುಗಳನ್ನು ನೋಡಬಹುದು. ಆದರೆ ಪಕ್ಕದಲ್ಲಿ ಕಾಟಣ್ಣನ ೧೦೧ ನಾಯಿಗಳಿಗೆ ಅನ್ನ ಹಾಕಿ ತಾವೂ ಸಹ ಊಟಮಾಡಿ ಪಗಡೆಯಾಟ ಆಡಿದರೆಂಬ ಐತಿಹ್ಯವಿದೆ.

೮. **''ರಸಾಸಿದ್ಧನ ಬಂಡೆ'' :** ಸುಂಕೇಮಲೆ ಸಿದ್ದೇಶ್ವರನು ಜೋಗಿಯ ವೇಷವನ್ನು ದರಿಸಿ ಉಪಾಯದಿಂದ ರಕ್ಕಸರ ವಿಷವನ್ನೆಲ್ಲಾ ಖಾಲಿ ಮಾಡುತ್ತಾನೆ. ಖಾಲಿ ಮಾಡಿದ ನಂತರ ರಸಾಸಿದ್ಧನನ್ನು ಸಂಹಾರ ಮಾಡಲು ಮುಂದಾದನು. ರಸಾಸಿದ್ಧ ಮತ್ತು ಅಂಗ್ಸರೆಂಬ ದೈತ್ಯರು ವಿಷದ ತಯಾರಿಕೆಗಾಗಿ ಗಿಡಮೂಲಿಕೆಗಳನ್ನು ತರಲು ಪೂರ್ವದ ಕಡೆಗೆ ಹೋಗಿರುತ್ತಾರೆ. ಇತ್ತ ಭೈರವನು ಕುರುಬನ ವೇಷವನ್ನು ಧರಿಸಿ ಅವನಲ್ಲಿಗೆ ಹೋಗಿರುತ್ತಾನೆ.

ಇವರಿಬ್ಬರಿಗೂ ಸಹ ವಾಗ್ವಾದ ನಡೆದು, ಕೊನೆಗೆ ಘನಘೋರವಾದ ಯುದ್ಧ ನಡೆಯುತ್ತದೆ. ಅಲ್ಲೊಂದು ವಿಶಾಲವಾದ ಬಂಡೆಯ ಮೇಲೆ ಅವರಿಬ್ಬರೂ ಯುದ್ಧವಾಡಿದ ಸ್ಥಳವನ್ನು ಜನರು ಸಿದ್ಧನಾಥನ ಬಂಡೆ ಅಥವಾ ರಸಾಸಿದ್ಧನ ಬಂಡೆ ಎಂತಲೂ ಕರೆಯುತ್ತಾರೆ. ಅಲ್ಲಿ ಮಾನವಾಕೃತಿಯ ಹೆಜ್ಜೆಗಳು, ಕಾಲುಮುಂಡಿಯೂರಿದ ಹೆಜ್ಜೆಗಳು ಅಗಲವಾಗಿ ರಾಕ್ಷಸರ ಹೆಜ್ಜೆಗಳ ತರಹ ಕಾಣುವ ಗುರುತುಗಳು ಕಂಡು ಬರುತ್ತವೆ.

೯. **ಕೋಣನಹಳ್ಳಿ ಮತ್ತು ಕುರುಬನಹಳ್ಳಿಗಳ ಐತಿಹ್ಯ :** ಈ ಎರಡು ಹಳ್ಳಿಗಳು ಬಳ್ಳಾರಿ ಜಿಲ್ಲೆಯ ಕೊಟ್ಟೂರು ಹತ್ತಿರ ಇವೆ. ಕೋಣ ಮತ್ತು ಟಗರುಗಳ ಪ್ರತೀಕವಾಗಿ ಈ ಎರಡು ಹಳ್ಳಿಗಳ ಹೆಸರುಗಳನ್ನು ಇಡಲಾಗಿದೆ. ಅದೇನೆಂದರೆ ಕೈಲಾಸದಲ್ಲಿ ಗಾಂಧರ್ವ ಕನ್ಯೆಯರು ತಾವು ಮಾಡಿದ ತಪ್ಪಿಗಾಗಿ ಶಿವನ ಶಾಪದಿಂದ ಭೂಲೋಕದಲ್ಲಿ ಕೋಣ ಮತ್ತು ಟಗರುಗಳಾಗಿ ಹುಟ್ಟಿದರು. ರಕ್ಕಸನಾದ ರಸಾಸಿದ್ಧನು ಸುಂಕೇಮಲೆಯ ಬೆಟ್ಟದಲ್ಲಿ ವಾಸವಾಗಿದ್ದು ಇವನ ವಾಹನವಾಗಿ ಕೋಣವು ಇವನ ಹತ್ತಿರವಿತ್ತು. ಹಾಗೂ ಬಲ್ಲಾಯರಾಯನು ಬಹುಮಾನವಾಗಿ ಸುಂಕಪ್ಪನಿಗೆ ಟಗರನ್ನು ಕೊಟ್ಟಿದ್ದನು. ಈತ ಟಗರಿನೊಂದಿಗೆ ಕುಮ್ಮತಿಯ ಬಳಿ ವಾಸವಾಗಿದ್ದನು. ಹೀಗಿರುವಾಗ ಟಗರಿಗೂ, ಕೋಣಕ್ಕೂ ಗೆಳೆತನವು ಬೆಳೆಯಿತು. ಕೋಣವು ಸುಂಕೇಮಲೆಯ ಬೆಟ್ಟದಿಂದ ಬಂದು ಕುಮುತಿಯ ಹತ್ತಿರ 'ವಲಸೆ' ಹತ್ತಿರ ಟಗರಿಗಾಗಿ ಕಾಯುತ್ತಿರಬೇಕು. ಕುಮುತಿಯ ರೇವಿನ ಹತ್ತಿರವಿರುವ ಟಗರು ಬಂದು ಜೊತೆಗೂಡಿ ರಾತ್ರಿಯೆಲ್ಲಾ ಕೊಟ್ಟೂರು ಅಡವಿಯಲ್ಲೆಲ್ಲಾ ಮೇದು ಉಜ್ಜನಿಕೆರೆಯಲ್ಲಿ ನೀರು ಕುಡಿದು ಬರಬೇಕು. ಇವೆರಡಕ್ಕೂ ಒಪ್ಪಂದವಾಗಿ ಒಂದನ್ನು ಬಿಟ್ಟು ಒಂದು ಹೋಗುವಂತಿಲ್ಲ. ಹೀಗಿರುವಾಗ ಒಂದು ದಿನ ಕೋಣವು ಬರಲು ತಡವಾಯಿತು. ಟಗರು ನಿನ್ನೆಯ ಹೆಜ್ಜೆಯ ಗುರುತುಗಳನ್ನು ನೋಡಿ ಕೋಣವು ತನ್ನನ್ನು ಬಿಟ್ಟು ಹೋಗಿದೆಯೆಂದು ಸಿಟ್ಟಿನಿಂದ ಮೇಯಲು ಹೋಯಿತು. ನಂತರ ಇತ್ತ ಕಡೆ ಕೋಣವು ತಡವಾಗಿ ಬಂತು. ಬಂದ ಕೋಣವನ್ನು ಟಗರು ಇರಿದು ಸಾಯಿಸಿತು. ನಿಜಾಂಶವನ್ನರಿತ ಟಗರು ಸಹ ಅನ್ಯಾಯವಾಗಿ ತನ್ನ ಸ್ನೇಹಿತನನ್ನು ಕಳೆದುಕೊಂಡೆನಲ್ಲಾ ಎಂದು ಹಾರಿ ತಾನೂ ಸಹ ಪ್ರಾಣಬಿಟ್ಟಿತು. ಅತ್ತ ರಸಾಸಿದ್ಧನ ಕಡೆಯವರು ಕೋಣವನ್ನು ಹುಡುಕುತ್ತಾ ಹಾಗೂ ಭೈರವನು ತನ್ನ ಟಗರನ್ನು ಹುಡುಕುತ್ತಾ ಬಂದರು. ಬಂದು ನೋಡಿದಾಗ ಕೋಣ ಮತ್ತು ಟಗರು ಸತ್ತು ಬಿದ್ದಿದ್ದವು. ಭೈರವನು ಅವುಗಳನ್ನು ಸ್ಪರ್ಶಮಾಡಿದ ನಂತರ ಅವುಗಳು ಭೂಲೋಕದಿಂದ ಮುಕ್ತಿ ಪಡೆದು ಮೊದಲಿನ ಹಾಗೆ ಗಂಧರ್ವ ಕನ್ಯೆಯರಾಗಿ ಕೈಲಾಸದಲ್ಲಿ ಮರುಜನ್ಮ ಪಡೆದರಂತೆ. ಇವುಗಳ ನೆನಪಿಗಾಗಿ ಸುಂಕೇಮಲೆ ಸಿದ್ದೇಶ್ವರನು ಕೊಟ್ಟೂರಿನ ದಕ್ಷಿಣಕ್ಕಿರುವ ಉಜ್ಜನಿಯ ಹತ್ತಿರ ಕೋಣನಹಳ್ಳಿ ಮತ್ತು ಕುರುಬನಹಳ್ಳಿ ಎಂದು ನಾಮಕರಣ ಮಾಡಿದನೆಂದು ಐತಿಹ್ಯವಿದೆ.

೧೦. **ರಸಾಸಿದ್ಧನ ತಲೆ :** ಭೈರವನಿಗೂ ಮತ್ತು ರಸಾಸಿದ್ಧನಿಗೂ ಸಿದ್ಧನಾತ ಬಂಡೆ ಎಂಬಲ್ಲಿ ಘನಘೋರವಾದ ಯುದ್ಧ ನಡೆಯುತ್ತದೆ. ಹೀಗೆ ಯುದ್ಧ ನಡೆಯುತ್ತಿರುವಾಗ ಭೈರವನು ತನ್ನ ಖಡ್ಗದಿಂದ ರಸಾಸಿದ್ಧನ ಶಿರವನ್ನು ಮೇಲುಗಿರಿಗೆ ಬೀಳುವಂತೆ ಹಾರಿಸುತ್ತಾನೆ. ಅದು ಅಲ್ಲಿಗೆ ಹೋಗಿ ಬಿದ್ದಿದೆಯಂತೆ. ಅದನ್ನು ರಸಾಸಿದ್ಧನ ತಲೆ ಎಂದು ಕರೆಯುತ್ತಾರೆ. ಈ ಮೇಲುಗಿರಿಯಲ್ಲಿ ಮುಳ್ಳಿನ ಪೊದೆ ಹತ್ತಿರ ಮಾನವನ ತಲೆಯಾಕೃತಿಯ ದೊಡ್ಡದಾದ ಕಲ್ಲು ಇದೆ. ಸಣ್ಣ ಜಾತ್ರೆ ನಡೆಯುವ ಸಂದರ್ಭದಲ್ಲಿ ಮೊಳಕಾಲ್ಮುರುವಿನವರು ಆ ಬೆಟ್ಟಕ್ಕೆ ಸಿದ್ದೇಶ್ವರನನ್ನು ತೆಗೆದುಕೊಂಡು ಹೋದಾಗ ಈ ರಸಸಿದ್ಧನ ತಲೆಗೆ ವಿಶೇಷವಾದ ಪೂಜೆ ಸಲ್ಲುತ್ತದೆ.

ಈ ಮೇಲಿನ ಎಲ್ಲಾ ಐತಿಹ್ಯಗಳು ಹಲವು ಪ್ರಶ್ನೆಗಳನ್ನು ಹಲವು ಸಮಸ್ಯೆಗಳನ್ನು ಒಟ್ಟೊಟ್ಟಿಗೆ ಸೃಷ್ಟಿಸುತ್ತವೆ. ಈ ಎಲ್ಲಾ ಐತಿಹ್ಯಗಳು ನಿರ್ಜೀವವಾಗಿದ್ದರೂ ಜೀವಂತ ಕಥೆಯನ್ನು ಮೌನವಾಗಿಯೇ ಹೇಳುತ್ತವೆ. ಇವುಗಳು ನುಂಕೇಮಲೆ ಭೈರವನ ಚರಿತ್ರೆಯನ್ನು ಕಟ್ಟಲು ಇರುವ ಬಹುಮುಖ್ಯ ಆಕರಗಳು. ಈಗಲೂ ಗೋಚರಿಸುವ ದುರ್ಗಮ ಬೆಟ್ಟಗಳು ಇಲ್ಲಿ ರಾಕ್ಷಸರು ನಿಜವಾಗಿಯೂ ಇದ್ದರು ಎಂದು ಕೂಗಿ ಹೇಳುವಂತಿವೆ. ಈ ಎಲ್ಲಾ ಐತಿಹ್ಯಗಳನ್ನು ಕೂಲಂಕುಶವಾಗಿ ನೋಡಿದರೆ ಕಾಣುವ ಸ್ಪಷ್ಟ ಅಂಶಗಳೆಂದರೆ :

೧. ದುರ್ಗಮ ಬೆಟ್ಟಗಳಿಂದಾಗಿ ಇಲ್ಲಿ ರಾಕ್ಷಸರು ನೆಲೆಸಿರಬೇಕು.

೨. ಈ ಬೆಟ್ಟಗಳಲ್ಲಿ ಮಹತ್ವದ ಗಿಡಮೂಲಿಕೆಗಳೂ ಈಗಲೂ ಸಿಗುವುದರಿಂದ ಇಲ್ಲಿ ಸಿಗುವ ಸಸ್ಯಗಳಿಂದ ರಾಕ್ಷಸರು 'ವಿಷ' ತಯಾರಿಸಿರಲು ಸಾಧ್ಯವಿದೆ.

೩. ಈಗ 'ಯಲ್ಲಮ್ಮ' ಎಂದು ಕರೆಯುವ 'ಕುತ್ತಿಗೆ' ಮಾತ್ರ ಇರುವ ಮೂರ್ತಿ ಮೂಲದಲ್ಲಿ 'ಮಲಿಯಮ್ಮ' ಇರಬೇಕೆಂದು. ಅದು ಕಲಾಂತರದಲ್ಲಿ ಜನಬಳಕೆಯಲ್ಲಿ ''ಯಲ್ಲಮ್ಮ''ನಾಗಿರಬೇಕೆಂದು ಊಹಿಸಬಹುದು.

೪. ಈಗ ಕುದುರೆ ಹೆಜ್ಜೆಗಳು ಎನ್ನುವ ಐತಿಹ್ಯ ಬೃಹದಾಕಾರವಾದ ಹೆಬ್ಬಂಡೆ ಬಿರುಸಾಗಿ ಈ ಆಕಾರ ಪಡೆದಿರಲು ಸಾಧ್ಯವಿದೆ. ಏಕೆಂದರೆ ಇದು ಕುದುರೆಯ ಹೆಜ್ಜೆಗಳನ್ನು ಹೋಲುವುದಿಲ್ಲ.

೫. ಒನಕೆ ಓಬವ್ವನಂತೆಯೇ ಕರ್ಪೂರದಮ್ಮನೂ ಸಹ ವೀರವನಿತೆ. ಆದರೆ ಇದು ಪುರಾಣದ ಕಥೆಯಾಗಿರುವುದರಿಂದ 'ಕರ್ಪೂರದಮ್ಮ' ಹೆಚ್ಚು ಬೆಳಕಿಗೆ ಬಂದಿಲ್ಲ. ಹಾಗೆ ನೋಡಿದರೆ ಒನಕೆಯಿಂದ ಬಂಡೆಯನ್ನು ಹೊಡೆದು ತನ್ನ ತಮ್ಮನ ರಸಸಿದ್ದನ ಯುದ್ದದಲ್ಲಿ ನೆರವಾದ ಕರ್ಪೂರದಮ್ಮನನ್ನು 'ವೀರವನಿತೆ' ಎಂತಲೂ ಕರೆಯಬಹುದು.

೬. ಕುಮುತಿಯ ಬಳಿ ಇರುವ ಮಾನವಾಕೃತಿಯ ಕಲ್ಲುಗಳು 'ನಿಜವಾಗಲೂ ಹಿಂದೆ ರಾಕ್ಷಸರು ಇದ್ದರೇನೋ' ಎನ್ನುವಷ್ಟರ ಮಟ್ಟಿಗೆ ಭ್ರಮೆಯನ್ನು ಹುಟ್ಟಿಸುತ್ತವೆ. ಈ ಬಗ್ಗೆ ಪ್ರಾಚ್ಯವಸ್ತು ಶಾಸ್ತ್ರಜ್ಞರೂ ಇನ್ನು ಅಧ್ಯಯನ ಕೈಕೊಳಪಡಿಸುವ ಅಗತ್ಯವಿದೆ.

**ಟಿಪ್ಪಣಿ :**

| | | | |
|---|---|---|---|
| ೧. | ಜಾನಪದ ಕೈಪಿಡಿ | - | ಡಾ॥ ಹೆಚ್.ಜೆ. ಲಕ್ಕಪ್ಪಗೌಡ ಪ್ರಧಾನ ಸಂಪಾದಕರು (ಪು-೧೩೪ - ೧೩೬) |
| ೨. | ಜನಪದ ಸಾಹಿತ್ಯ ರೂಪಗಳು | - | ರಾ.ಗೌ. (೩೨-೪೦) |
| ೩. | ಬಳ್ಳಾರಿ ಜಿಲ್ಲೆಯ ಐತಿಹ್ಯಗಳು | - | ಕನ್ನಡ.ವಿ.ವಿ.ಪಿ ಹೆಚ್.ಡಿ ಪ್ರಬಂಧ ( ಎ. ಕರಿಬಸಪ್ಪ ೯-೧೨) |
| ೪. | ಜನಪದ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ | - | ಕೆ. ಎಂ. ರೇವಣ್ಣ (ಜನಪದ ಲೇಖನ) |

## ೭.೨.೪ : ನಾಟಕ (ದೊಡ್ಡಾಟ)

ಮೊಳಕಾಲ್ಮುರು ತಾಲ್ಲೂಕಿಗೆ ಸೇರಿದ ಯರ್ರೇನಹಳ್ಳಿ ಎಂಬ ಗ್ರಾಮದಲ್ಲಿ ವಾಲ್ಮೀಕಿ ಜನಾಂಗದ ಡಿ.ಬಿ. ಅಜ್ಜಮುನಿ ಎಂಬುವರು ಶಾಲಾ ಶಿಕ್ಷಕರಾಗಿದ್ದುಕೊಂಡು ಸಂಗೀತದ ಗೀಳನ್ನು ಅಂಟಿಸಿಕೊಂಡಿರುವವರಾಗಿರುತ್ತಾರೆ. ತನ್ನ ತಂದೆಯೂ ಸಹ ನಾಟಕದ ಶಿಕ್ಷಕರಾದ್ದರಿಂದ ಈತನು ತನ್ನ ೧೮ ನೆಯ ವಯಸ್ಸಿನಿಂದಲೂ ಧೊಡ್ಡಾಟ ರಾಮಾಯಣ, ಮಹಾಭಾರತ ಇಂತಹ ವಿವಿಧ ಪ್ರಕಾರಗಳಲ್ಲಿ ವಿದ್ವತ್ತನ್ನು ಪಡೆದು ದೊಡ್ಡಾಟದಲ್ಲಿ ಕಂಡು ಬರುವ ಸಂಗೀತದ ತಾಳ, ಲಯ, ತಬಲ - ಇವುಗಳ ಬಗ್ಗೆ ಬಹುವಾಗಿ ತಿಳಿದುಕೊಂಡಿದ್ದಾರೆ. ಅದರಲ್ಲೂ ಕೋಲು, ಯಕ್ಷಗಾನ, ಹಾಗೂ ರಾಮಾಯಣ ಓದುವುದರಲ್ಲಿ ಒಲವು ಬೆಳಸಿಕೊಂಡಿದ್ದಾರೆ.

ಅದರಲ್ಲೂ 'ನುಂಕಪ್ಪ'ನ ಪುರಾಣ ಓದುವುದೆಂದರೆ ಅವರಿಗೆ ಎಲ್ಲಿಲ್ಲದ ಸಂತೋಷ, ಭಕ್ತಿಗಳು ಒಮ್ಮೆಲೆ ಮೂಡಿ ಬರುತ್ತದೆ. ಊರಲ್ಲಿ ಈ ದಿನ ಪುರಾಣ ಓದುತ್ತೇನೆ ಎಂದರೆ ಸಾಕು ಹಲವಾರು ಮಂದಿ ಮನೆಯ ಮುಂದೆ ಬಂದು ಸೇರುವುದರಜೊತೆಗೆ ಬೇರೆ ಹಳ್ಳಿಗಳಿಂದಲೂ ಸಹ ಬರುತ್ತಿದ್ದರು. ಆ ದಿನ ಪುರಾಣ ಕೇಳುವವರು ಮಡಿ, ಮೈಲಿಗೆ ಯಿಂದ ಸ್ವಾಮಿಯನ್ನು ಸ್ಮರಿಸುತ್ತಿದ್ದರು. ಭಾನುವಾರ ರಾತ್ರಿ ೮ ಕ್ಕೆ ಸೇರಿದರೆ ಪುರಾಣ ಮುಗಿಯುವವರೆಗೂ ಕೇಳುವ ಸಂಪ್ರದಾಯವಿತ್ತು. ಇಲ್ಲವಾದರೆ ತಮಗೆ ಕೇಡುಂಟಾಗಬಹುದೆಂಬ ಭಯ ಇವರನ್ನು ಆವರಿಸಿತ್ತು. ನುಂಕಪ್ಪನ ಪುರಾಣ ಓದುವುದು ತುಂಬಾ ಪ್ರಚಾರವಾಗಲು ಬೇರೆ ಬೇರೆ ಹಳ್ಳಿಗಳಿಗೂ ಈತನನ್ನು ಕರೆಸಿಕೊಳ್ಳಲಾಯಿತು.

ಬಯಲಾಟದಲ್ಲಿ ಬರುವ ಸಂಗೀತದ ಲಯ - ತಾಳಗಳು ಈತನಿಗೆ ಪರಿಚಯವಿರುವುದರಿಂದ ಈ ಪುರಾಣವನ್ನು ಯಕ್ಷಗಾನ ರೂಪಕ್ಕೆ (ಬಯಲಾಟ) ಪರಿವರ್ತಿಸಿದರು ''ನುಂಕೇಮಲೆ ಸಿದ್ದೇಶ್ವರ'' ಎಂದು ಈ ನಾಟಕಕ್ಕೆ ಹೆಸರು ಕೊಟ್ಟು ಈತನೇ ನಿರ್ದೇಶಕನಾಗಿ ಸುಮಾರು ೨೫ ವರ್ಷಗಳಿಂದಲೂ ನಾಟಕವನ್ನು ಆಡಿಸಿದ್ದಾನೆ. ಅದು ಈತನಿಂದಲ್ಲದೇ ಮಲ್ಲಯ್ಯನವರಿಂದ ಕಾತ್ರಿಕೆ ಹಟ್ಟಿ, ಕುಮುತಿ, ರಾಮದುರ್ಗ, ಹಲವಾರು ಭಾಗಗಳಲ್ಲಿ ಹಲವುಬಾರಿ ಅಭಿನಯಗೊಂಡಿದೆ. ಪುರಾಣದಲ್ಲಿ ಬರುವ ಕೆಲವು ಪಾತ್ರಗಳನ್ನು ಸೃಷ್ಠಿಸಿ ಕಥೆಯನ್ನು ಸಂಭಾಷಣೆಯ ರೂಪದಲ್ಲಿ ಜನಸಾಮಾನ್ಯರಿಗೆ ಅರ್ಥವಾಗುವಂತೆ ಭಾಷೆಯನ್ನು ಸರಳೀಕರಿಸಿಕೊಂಡಿದ್ದಾನೆ. ಇದರಲ್ಲಿ ಸಂಗೀತ ಸಂಭಾಷಣೆಯ ಸಂಯೋಜನೆಯಿಂದ ಕೇಳುಗರಿಗೆ ಮನಮಿಡಿಯುವಂತೆ ಮೈಪುಳಕಗೊಳ್ಳುವುದು.

ಈ ನಾಟಕದಲ್ಲಿ ನಾಯಕ ಕಾಲಭೈರವ, ಈತನಿಗೆ ಅಕ್ಕನಾಗಿ ಕರ್ಪೂರದಮ್ಮ, ಕಾಲಭೈರವನ ಮತ್ತೊಂದು ರೂಪವಾಗಿ ಜೋಗಿ ಹಾಗೂ ಪ್ರವೇಶದಲ್ಲಿ ತಂದೆಯಾಗಿ ಈಶ್ವರ, ಸಿದ್ದರ ಬೆಟ್ಟದಲ್ಲಿ ರಕ್ಕಸರಾಗಿ - ರಸಸಿದ್ದ, ಅಂಗ್ಸ, ದಾಸಿಯರಾದ ನುಂಕವ್ವ, ಮಲಿಯವ್ವ, ನೀಲವರ್ಣ ಹಾಗೂ ದ್ರೋಣಾದ್ರಿ ಮಲೆಗೆ ಅಧಿಪತಿಯಾಗಿ ಚಂಡಿಯೂ ಭೈರವನ ಪರಮ ಭಕ್ತರಾಗಿ ಹರಳಯ್ಯ, ಕಾಟಣ್ಣ, ಬೋಸಯ್ಯ ಹಾಗೂ ಬಲ್ಲಾಳ ರಾಯ - ಹೀಗೆ ಪ್ರಮುಖ ಪಾತ್ರಗಳಲ್ಲಿ ಕಂಡು ಬರುತ್ತಾರೆ.

ನಾಟಕದ ಪ್ರವೇಶಕ್ಕೆ ಗೋಪಾಲವನ್ನು ಸೃಷ್ಟಿಸಿ ಈತನನ್ನು ಸಂಜೆ ಗೋಪಾಲ ಎಂದು ಕರೆಯುತ್ತಾರೆ. ಈ ಪಾತ್ರವು ನಿರೂಪಕನಂತೆ ನಾಟಕದ ಹೆಸರನ್ನು ಹೇಳಿ ನಾಂದಿ ಹಾಡುವುದು, ಸಾರಥಿಯು ಯಾವಾಗಲೂ ರಂಗ ಮಂದಿರದಲ್ಲಿದ್ದು ನಾಟಕಕ್ಕೆ ಕಳೆಯನ್ನು ತುಂಬಿಕೊಡುತ್ತಾನೆ. ಕಾತ್ರಿಕೆ ಹಟ್ಟಿ ಮಸೆಯ್ಯ ಸಾರಥಿ ವೇಷದಲ್ಲಿ ತುಂಬಾ ಪ್ರಸಿದ್ಧಿ.

ಪ್ರತಿಯೊಂದು ಪಾತ್ರವೂ ಸಹ ನಾಟಕದ ಸನ್ನಿವೇಶಕ್ಕೆತಕ್ಕಂತೆ ಅಭಿನಯ ಮಾಡುವುದು ಸಹಜ. ಒಂದು ಪದ ಹಾಡಿಯೇ ಮುಂದೆ ಪ್ರೇಕ್ಷಕರಿಗೆ ಅರ್ಥವಾಗುವಂತೆ ಮಾತು ಹೇಳುವರು. ''ನಾನೊಂದು ಪರಿ ಹೇಳುತ್ತೇನೆ ಚೆನ್ನಾಗಿ ಲಾಲಿಸು'' ಎಂದ ಕೂಡಲೇ ತಾಳ ಮೇಳಗಳ ಸಂಗೀತ ಸಂಯೋಜನೆಯಿಂದ ಪದ ಹಾಡಿ ಮಾತನ್ನಾರಂಭಿಸುತ್ತಾರೆ. ಭಲಲ ಭೈಳಿರೈ - ಎಂದು ಗಂಡು ಪಾತ್ರಗಳು ಮಾತುಗಳನ್ನಾರಂಭಿಸುವುದು ಸಹಜವಾಗಿರುತ್ತದೆ.

ನಾಟಕವಾಡುವ ಮುಖ್ಯ ಪಾತ್ರಧಾರಿಗಳು ಒಪ್ಪತ್ತಿನಿಂದ ಹಾಲು, ಹಣ್ಣು, ಸೇವಿಸಿ, ಆಡುವ ಪದ್ಧತಿಯಿದೆ. ನಾಟಕವನ್ನು ಕೇಳುವ ಪ್ರೇಕ್ಷಕರಾದರೂ ಭಯ, ಭಕ್ತಿಯಿಂದ ನೋಡಿ ತಮ್ಮ ಪಾಪಗಳನ್ನು ದೂರಮಾಡಿಕೊಳುತ್ತಾರೆ. ನಾಟಕವಾಡಿದ ಮರುದಿನ ಪಾತ್ರಧಾರಿಗಳೆಲ್ಲರೂ ಸೇರಿ ಗುಡ್ಡಕ್ಕೆ ಹೋಗಿ ನುಂಕಪ್ಪನ ದರ್ಶನ ಪಡೆಯುವ ಪದ್ಧತಿಯಿದೆ. ಈ ಕ್ಷೇತ್ರದ ಸುತ್ತ-ಮುತ್ತ ಭಾಗಗಳಿಗೆಲ್ಲಾ ಈ ಕಥೆಯು ಚಿರಪರಿಚಿತ. ಜಾತ್ರೆಯ ಸಂದರ್ಭದಲ್ಲಿಯೂ ಸಹ ಇದನ್ನು ಅಭಿವ್ಯಕ್ತಿಸುತ್ತಾರೆ.

ಈಗ ಅಜ್ಜಮುನಿಯವರು ಈ ಬಯಲನಾಟಕವನ್ನು ಸಾಮಾಜಿಕ ನಾಟಕವಾಗಿ ಮಾರ್ಪಡಿಸಲು ಪ್ರಯತ್ನಿಸುತ್ತಿದ್ದಾರೆ. ಪ್ರಸ್ತುತ ಈ ನಾಟಕವು ಆಧುನಿಕ ಪ್ರಭಾವಗಳಲ್ಲಿ ಒಂದು. ಏಕೆಂದರೆ ಇಂದು ಪುರಾಣವನ್ನು ಕೇಳುವ ತಾಳ್ಮೆ ಇಲ್ಲದೇ ಇರುವುದರಿಂದ ಆಯಾ ಪಾತ್ರಗಳ ಮೂಲಕ ಮನಮುಟ್ಟುವಂತೆ ನಾಟಕ ಯಶಸ್ವಿಯಾಗಿದೆ. ಈ ನಾಟಕವು ಜನಪದ ಪಠ್ಯಾಂತರದ ಪ್ರಮುಖ ಲಕ್ಷಣವನ್ನು ಹೊಂದಿದೆ. ಈ ನಾಟಕದ ಸಂಭಾಷಣೆಯಲ್ಲಿ ಸ್ಥಳೀಯರ ಹೆಸರನ್ನು ಬಳಸುವ ಮೂಲಕವೋ.. ದಿನನಿತ್ಯದ ಅನುಭವದ ಮಾತುಗಳನ್ನು ಹೇಳುವಮೂಲಕವೋ ಪುರಾಣವನ್ನು ಪ್ರಸ್ತುತತೆಯನ್ನಾಗಿಸುತ್ತಾರೆ. ಈ ಗುಣದಿಂದಾಗಿಯೇ 'ನುಂಕೇಮಲೆ ಸಿದ್ದೇಶ್ವರ ನಾಟಕ ತುಂಬಾ ಪ್ರಸಿದ್ಧಿಯನ್ನು ಪಡೆದಿದೆ. ಹಾಗೆಯೇ ಭೈರವನ ಪವಾಡಗಳ ವೈಭವೀಕರೂ ನಾಟಕದಲ್ಲಾಗುವುದರಿಂದ ಆಧುನಿಕತೆಯ ಯುವ ಪೀಳಿಗೆಯಲ್ಲೂ ಭಯ, ಭಕ್ತಿಯನ್ನು ಮೂಡಿಸುತ್ತದ.

## ೮. ನುಂಕೇಮಲೆ ಭೈರವ ಮತ್ತು ಪ್ರಸ್ತುತ ಜಗತ್ತು

ಜಾಗತೀಕರಣದ ಮುಖಾಮುಖಿಯಾಗುತ್ತಿರುವ ಈ ಹೊತ್ತಿನಲ್ಲಿ ನಂಬಿಕೆಗಳು, ಆಚರಣೆಗಳು, ನಿಷೇದಗಳು ಸಡಿಲವಾಗುತ್ತಿದ್ದರೂ ಅವುಗಳದು ಬೇರೆಯದೇ ಆದ ಆಯಾಮ ಪಡೆದುಕೊಳ್ಳುತ್ತವೆ. ಆಧುನಿಕ ಪ್ರವೃತ್ತಿಗಳು ನುಂಕೇಮಲೆ ಸಂಪ್ರದಾಯದೊಂದಿಗೆ ಮಿಳಿತಗೊಳ್ಳುತ್ತಿವೆ. ಅದು ಬದಲಾದ ಪರಿಸ್ಥಿತಿಯೊಂದಿಗೆ ಹೊಂದಿಕೊಳ್ಳುವ ಅನಿವಾರ್ಯತೆಯೂ ಕೂಡ ಇದೆ. ಮೊದಲಲ್ಲಿ ಭಕ್ತಾಧಿಗಳು ಬರಿಗಾಲಿನಿಂದ ನಡೆದುಕೊಂಡು ಬರುತ್ತಿದ್ದರು ಇಲ್ಲವೆ ಎತ್ತಿನ ಬಂಡಿಟ್ಟಿಕೊಂಡು ಬರುತ್ತಿದ್ದರು. ಆದರೆ ಈಗ ಕೆಲ ಭಕ್ತಾದಿಗಳು ಮೋಟರ್ ಸೈಕಲ್, ಬೈಕ್, ಜೀಪು, ಕಾರು ಮುಂತಾದ ಆಧುನಿಕ ವಾಹನಗಳಲ್ಲಿಯೂ ದೇವರ ದರ್ಶನಕ್ಕೆ ಬರುತ್ತಿರುವುದನ್ನು ಕಾಣಬಹುದು. ಈಗ ದೇವಸ್ಥಾನದ ಆವರಣದಲ್ಲಿ ಕಲ್ಯಾಣ ಮಂಟಪವಿರುವುದರಿಂದಾಗಿ ಇಲ್ಲಿ ಮದುವೆಗಳೂ ನಡೆಯುತ್ತಿರುವುದು ಇತ್ತೀಚಿನ ಪ್ರವೃತ್ತಿಯಾಗಿದೆ. ಮೂಲದಲ್ಲಿ ದೇವಸ್ಥಾನಗಳು ಹಳೆಯ ಮಾದರಿಯವುಗಳಾಗಿದ್ದವು. ಆದರೆ ಈಗ ಸಿಮೆಂಟಿನಿಂದ ಪ್ಲಾಸ್ಟರ್ ಮಾಡಿ ಬಣ್ಣಗಳಿಂದ ಕಂಗೊಳಿಸುತ್ತವೆ. ಹಾಗೆಯೇ ವಿದ್ಯುತ್ ದೀಪಗಳಿಂದ ಸುಸಜ್ಜಿತವಾಗಿದೆ. ಮತ್ತು ಸುಭದ್ರವಾದ ಕಬ್ಬಿಣದ ಬಾಗಿಲುಗಳಿಂದ ಸುರಕ್ಷಿತವಾಗಿವೆ. ಇವುಗಳೆಲ್ಲವೂ ಆಧುನಿಕತೆಯ ಪ್ರಭಾವವಾಗಿದೆ.

ಇಂದು ವೈಜ್ಞಾನಿಕಯುಗವಾಗಿ ಸಾಕಷ್ಟು ಕ್ರಿಮಿನಾಶಕಗಳೂ ಬಂದರೂ ಸುತ್ತ ಮುತ್ತಲಿನ ರೈತರು ನುಂಕಪ್ಪನ ತೀರ್ಥವನ್ನೇ ಬೆಳೆಗಳಿಗೆ ಸಿಂಪಡಿಸಿ ಕ್ರಿಮಿಗಳನ್ನು ನಾಶಮಾಡಿದ ಉದಾಹರಣೆಗಳೂ ಸಿಗುತ್ತವೆ. ಹಾಗೆಯೇ ಅಂತರ್ಜಲವನ್ನು ಕಂಡುಹಿಡಿಯುವ ಅತ್ಯಾಧುನಿಕ ಯಂತ್ರ ಬಂದರೂ ಮೊಳಕಾಲ್ಮುರು ಪರಿಸರದ ಭಕ್ತಾದಿಗಳು ತಮ್ಮ ಹೊಲದಲ್ಲಿ ಬೋರು ಹಾಕಿಸುವಾಗ ನುಂಕಪ್ಪನನ್ನು ಪತ್ರಿ ಕೇಳುತ್ತಾರೆ. ಆಗ ಬಲಭುಜದಿಂದ ಪತ್ರಿ ಕೊಟ್ಟರೆ ಅವರು ಕೇಳಿಕೊಂಡ ಸ್ಥಳದಲ್ಲಿ ಬೋರು ಹಾಕಿಸಿದಾಗ ನೀರು ಬಿದ್ದಿರುವ ಎಷ್ಟೋ ಉದಾಹರಣೆಗಳು ಸಿಗುತ್ತವೆ. ಇನ್ನು ಅನಾರೋಗ್ಯದಿಂದ ಬಳಲುವಾಗ ಸುತ್ತ ಮುತ್ತಲ ಹಳ್ಳಿಯವರು ಯಾರೂ ಸಹ ಆಸ್ಪತ್ರೆಗೆ ಹೋಗುವುದಿಲ್ಲ. ದೇವರ ತೀರ್ಥ ಕುಡಿದು ಮೈಮೇಲೆ ಹಾಕಿಕೊಂಡರೆ ಅರಾಮಾದ ಉದಾಹರಣೆಗಳು ಸಿಗುತ್ತವೆ. ಈ ಮೇಲಿನ ಉದಾಹರಣೆಗಳು ಕೇಳಲು ಹಾಸ್ಯಾಸ್ಪದವಾಗಬಹುದು. ಆದರೂ ಇಂದಿಗೂ ಇವುಗಳು ಸತ್ಯವಾಗಿರುವುದು ಕಂಡುಬರುತ್ತದೆ.

ಜಾತ್ರೆಯಲ್ಲಿಯೂ ಆಧುನಿಕ ಪ್ರಭಾವ ಎದ್ದು ಕಾಣುತ್ತದೆ. ಮೊದಲೆಲ್ಲಾ ಸುತ್ತ ಮುತ್ತಲ ಹಳ್ಳಿ ಜನರು ಸೀಮಿತ ಜನಸಂದಣಿಯಲ್ಲಿ ನಡೆಯುತ್ತಿತ್ತು. ಆದರೆ ಇಂದು ಸಹಸ್ರಾರು ಜನಸಂಖ್ಯೆ ಸೇರುತ್ತದೆ. ಸಾವಿರಾರು ವಾಹನಗಳು ಬಂದಿರುತ್ತವೆ. ಹಾಗೆಯೇ ಜಾತ್ರೆಯಲ್ಲಿ ಮಕ್ಕಳ ಸಾಮಾನುಗಳ ಅಂಗಡಿಗಳು, ತಿಂಡಿತಿನಿಸುಗಳ ಅಂಗಡಿಗಳು ಮುಂತಾದ ಆಧುನಿಕ ಪ್ರವೃತ್ತಿಯು ಎಲ್ಲಾ ಬಗೆಯ ಅಂಶಗಳನ್ನು ಕಾಣಬಹುದಾಗಿದೆ. ಅಂತರ್ಜಲ ಬತ್ತಿಹೋಗುತ್ತಿರುವ ಈ ದಿನಮಾನಗಳಲ್ಲಿಯೂ ದೇವರ ಹೊಂಡದಲ್ಲಿ ನೀರಿರುವುದು ಪವಾಡವೇ ಸರಿ.

ನಾಥಪಂಥವು ಇಂದು ಎಂದಿಗಿಂತಲೂ ಹೆಚ್ಚು ಪ್ರವರ್ಧಮಾನಕ್ಕೆ ಬರುತ್ತಿದ್ದ ನಾಸಿಕದಲ್ಲಿ ನಡೆಯುವ ಕುಂಬಮೇಳಗಳಂತಹ ಕಾರ್ಯಕ್ರಮವನ್ನು ಆಯೋಜಿಸಿಕೊಳ್ಳಲಾಗುತ್ತಿದೆ. ಆ ಮೂಲಕ ನಾಥಪಂಥದ ಸಹಸ್ರಾರು ಸಾಧುಗಳನ್ನು ಒಂದೆಡೆಸೇರಿಸುವ ಪ್ರಕ್ರಿಯೆ ನಡೆಯುತ್ತಿದೆ. ಇದೂ ಸಹ ಆಧುನಿಕತೆಯ ಪ್ರಭಾವದಲ್ಲಿ ಒಂದಾಗಿದೆ.

ಇತ್ತೀಚಿನ ನಂಬಿಕೆ, ಆಚರಣೆಗಳಲ್ಲಿಯೂ ತೀವ್ರ ಬದಲಾವಣೆಗಳಾಗಿವೆ. ಹಿಂದೆ ಇದ್ದಂತಹ ಅತಿಯಾದ ಭಾವುಕತೆಯಾಗಲಿ, ಅತ್ಯಂತ ತೀವ್ರತೆಯಾಗಲಿ ಈಗ ಉಳಿದುಕೊಂಡಿಲ್ಲ. ತುಂಬಾ ಸರಳವಾಗಿ, ಅಷ್ಟೇ ಸರ್ವ ಸಾಮಾನ್ಯ ಎನ್ನುವ ಭಾವದೊಂದಿಗೆ ಇಂದಿನ ಭಕ್ತಿ ಬೆಸೆದುಕೊಂಡಿದೆ. ಮನೋವಿಶ್ಲೇಷಣೆಯ ಮೂಲಕ ನೋಡುವುದಾದರೆ 'ನಂಬಿಕೆ' ಎನ್ನುವುದು ಈಗಲೂ ಗಾಢವಾಗಿದ್ದರೂ ಅದರ ಸ್ವರೂಪ ರೂಪ ಪರಿವರ್ತನೆಯ ಅಂಶಗಳು ಗಟ್ಟಿಯಾಗಿದ್ದರೂ ಅದರ ಹಿಂದಿನ ಭಾವ ಸಡಿಲವಾಗಿರುವುದನ್ನು ಗುರುತಿಸಬಹುದಾಗಿದೆ.

ಮೊದಲೆಲ್ಲಾ ಮದುವೆಯ ಆಚರಣೆಯನ್ನು ಹಿಂದೂ ಸಂಸ್ಕೃತಿಯಂತೆ ಒಂಭತ್ತು ದಿನಗಳ ಕಾಲ ವಿಜೃಂಬಣೆಯಿಂದ ನಡೆಯುತ್ತಿತ್ತು. ಆದರೆ ಈಗ ಎಲ್ಲಾ ಆಚರಣೆಗಳನ್ನು ೨ ದಿನಕ್ಕೆ ಮಿತಿಗೊಳಿಸಲಾಗಿದೆ. ಇದು ಬದಲಾಗುತ್ತಿರುವ ಸಮಾಜದ ಪ್ರತೀಕ. ಹಾಗೆಯೇ ನುಂಕೇಮಲೆ ಸಿದ್ದೇಶ್ವರನ ಜಾತ್ರೆಯೂ ಸಹ ಹಿಂದೆ ವಾರಗಟ್ಟಲೆ ವಿಜೃಂಬಣೆಯಿಂದ ನಡೆಯುತ್ತಿತ್ತು. ಆದರೆ ಇಂದು ೨ದಿನ ಮಾತ್ರ ನಡೆಯುತ್ತದೆ. ಇಂದು ಜನರು ವಾರಗಟ್ಟಲೆ ಜಾತ್ರೆಮಾಡುತ್ತಾ ಕೂರಲು ಸಮಯವಿಲ್ಲ. ಮೇಲಾಗಿ ಅವತ್ತೇ ದುಡಿದು ಅವತ್ತೇ ಉಣ್ಣುವಂತವರು ಕೆಲಸ ಬಿಟ್ಟು ಜಾತ್ರೆ ಮಾಡಲು ಬರದೇ ಇರುವುದೂ ಒಂದು ಕಾರಣವಾಗಿದೆ. ಹೀಗಾಗಿ ಜಾತ್ರೆ ಮಾಡುವ ಕಾಲಾವಧಿಯೂ ಕಡಿಮೆಯಾಗಿರುವುದನ್ನು ಕಾಣಬಹುದು.

ಜಾತ್ರೆಯಲ್ಲಿನ ಪ್ರಕ್ರಿಯೆಗಳು ಸಹ ತುಂಬಾ ಬದಲಾವಣೆಯಾಗಿವೆ. ಜನಪದ ಕಲೆಗಳು ಹಳ್ಳಿಗಳಲ್ಲಿ ಕಣ್ಮರೆಯಾಗುವ ಈ ಹೊತ್ತಿನಲ್ಲಿ ದೇವರ ಉತ್ಸವ ಜಾತ್ರೆಗಳಲ್ಲಿ ಮಾತ್ರ ಕಲೆಗಳು ಪ್ರದರ್ಶನವಾಗುತ್ತಾ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು. ಹಾಗೆಯೇ ನುಂಕೇಮಲೆ ಬೆಟ್ಟದಲ್ಲಿ ನಡೆಯುವ ಜಾತ್ರೆಯಲ್ಲಿಯೂ ಜನಪದ ಕಲೆಗಳು, ಪ್ರದರ್ಶನವಾಗುತ್ತವೆ. ಈ ಒಂದು ನೆಪದಲ್ಲಾದರೂ ಮೊಳಕಾಲ್ಮೂರು ಪರಿಸರದ ಜನಪದ ಕಲೆಗಳು ಈಗಲೂ ಮುಂದೆಯೂ ಉಳಿದುಕೊಂಡು ಹೋಗುತ್ತಿವೆ ಎಂದು ಹೇಳಬಹುದು. ವ್ಯಾಪಾರಿಕರಣದ ಪ್ರಭಾವದಿಂದಾಗಿ ಜಾತ್ರೆಯಲ್ಲಿ ಕೃಷಿ ಸಾಮಾಗ್ರಿಗಳು, ಮನೆಯ ದಿನ ಬಳಕೆಯ ವಸ್ತುಗಳು, ಬಟ್ಟೆಗಳು ಮುಂತಾದವುಗಳು ಮಾರಾಟವಾಗುತ್ತವೆ. ಇಂತಹ ಮಾರಾಟದ ಮನೋಭಾವವೂ ಸಹ ಜಾಗತೀಕರಣದ ಪ್ರಭಾವವೆಂದೇ ತಿಳಿಯಬಹುದು.

ಹೀಗೆ ನುಂಕೇಮಲೆ ಸಿದ್ದೇಶ್ವರನ ಆಚರಣೆ, ಸಂಪ್ರದಾಯ ಎಲ್ಲದರ ಮೇಲೆಯೂ ಆಧುನಿಕತೆಯ ನೆರಳು ನಿಚ್ಚಳವಾಗಿಯೇ ಗೋಚರಿಸುತ್ತದೆ. ಅದು ನಿತ್ಯ ಪರಿವರ್ತನಾಶೀಲ ಜಗತ್ತಿನ ಜೀವಂತ ಪ್ರಕ್ರಿಯೆಯೂ ಕೂಡ. ಜೀವಂತಿಕೆಯ ಜೀವ ಜಲವೂ ಹೌದು. ಈ ಮೇಲಿನ ಎಲ್ಲಾ ಅಂಶಗಳನ್ನು ನೋಡಿದರೆ ಆಧುನಿಕವಾಗಿ ಎಷ್ಟೊಂದು ಕ್ರಾಂತಿಕಾರಿ ಬದಲಾವಣೆಗಳಾದರೂ ಸಹ ಮೊಳಕಾಲ್ಮೂರು ಪರಿಸರದ ನುಂಕಪ್ಪನ ಭಕ್ತಾದಿಗಳ ಮೇಲೆ ಧಾರ್ಮಿಕ ಭಾವನೆಯ ಮೇಲೆ ಪರಿಣಾಮ ಬೀರಿದೆ. ಅವರ ಕ್ರಿಯೆಗಳ ಮೇಲೆ ಪರಿಣಾಮ ಬೀರಿರುವುದನ್ನು ಕಾಣಬಹುದು.

# ೯. ಸಮಾರೋಪ

ಯಾವುದೇ ಅಧ್ಯಯನದಲ್ಲಿ ತೀವ್ರವಾಗಿ ತೊಡಗಿಸಿಕೊಂಡಾಗ ಹೊಸ ಹೊಸ ಮುಖಗಳು, ದಾರಿಗಳು ಪರಿಚಯವಾಗುತ್ತಾ ಹೋಗುತ್ತವೆ. ಅಂತಹ ಅನುಭವವು ಪ್ರಸ್ತುತ ಅಧ್ಯಯನದಲ್ಲಿ ನನಗೂ ಆದದ್ದೆ. ಮೌಖಿಕ ಚರಿತ್ರೆಯನ್ನು ಈಗ ಕಾಣಸಿಗುವ ಐತಿಹ್ಯಗಳೊಂದಿಗೆ ಹೋಲಿಸಿ ನೋಡಿದರೆ ಕೆಲವು ಸತ್ಯಗಳು ಗೋಚರಿಸುತ್ತವೆ. ಹಾಗೆಯೇ ಸತ್ಯಕ್ಕೆ ದೂರವಾದ ಎಳೆಗಳೂ ಸಿಗುತ್ತವೆ. ಹೀಗಾಗಿ ಇಲ್ಲಿ ಸೂಕ್ಷ್ಮ ದೃಷ್ಟಿಕೋನದಿಂದ ಸತ್ಯಾಸತ್ಯತೆಗಳನ್ನು ಪರಾಮರ್ಶಿಸಿ ನೋಡುವ ಪ್ರಯತ್ನ ಮಾಡಿದ್ದೇನೆ. ಅಂತಹ ಕೆಲವು ಹೊಳಹುಗಳನ್ನು ಇಲ್ಲಿ ದಾಖಲಿಸಲು ಪ್ರಯತ್ನಿಸಿದ್ದೇನೆ. ಈ ದಾಖಲೆಗೆ ಪ್ರಮುಖವಾದ ಆಕರವೆಂದರೆ ಮೌಖಿಕ ಕಥೆ, ಐತಿಹ್ಯ, ಗೀತೆಗಳೇ ಆಗಿವೆ. ಹೀಗೆ ಕ್ಷೇತ್ರ ಕಾರ್ಯವನ್ನೇ ಆಧರಿಸಿ ಕೆಲ ಲಬ್ಯ ಲಿಖಿತಾಧಾರಗಳನ್ನು ಬಳಸಿಕೊಂಡು ಒಂದು ಸಂಶೋಧನಾ ಪ್ರಬಂಧವನ್ನು ಕಟ್ಟಲು ಸಾಧ್ಯವಿದೆಯೋ ಅಂತಹ ಸಾಧ್ಯತೆಯನ್ನು ನಾನು ಸಹ ಮಾಡಿದ್ದೇನೆ. ಆ ಪದ್ಧತಿಯೇ ಈ ಪ್ರಬಂಧದ ಜೀವಾಳ.

ಮೊದಲ ಅಧ್ಯಾಯದಲ್ಲಿ ಹೊಳಹುವಿನ ಉದ್ದೇಶ ಮತ್ತು ವ್ಯಾಪ್ತಿಯನ್ನು ಸೃಷ್ಟಿಗೊಳಿಸಿದ್ದೇನೆ. ಇಲ್ಲಿನ ಪ್ರಮುಖ ಉದ್ದೇಶವಾಗಿ ಸಾಂಸ್ಕೃತಿಕ ಕ್ಷೇತ್ರವೊಂದರ ಚರಿತ್ರೆಯನ್ನು ದಾಖಲಿಸುವುದೇ ಆಗಿದೆ, ಎನ್ನುವ ನನ್ನ ಮಿತಿಯನ್ನೂ ಹೇಳಿಕೊಂಡಿದ್ದೇನೆ. ಇಂತಹ ಒಂದು ಮಿತಿ ಈ ಅಧ್ಯಯನಕ್ಕಿದೆ.

ಎರಡನೇ ಅಧ್ಯಾಯದಲ್ಲಿ ಕಾಲಭೈರವ ನೆಲೆಗೊಂಡಿರುವ ಬಗೆಗಿನ ಕಥೆ, ಐತಿಹ್ಯ, ಶಾಸನ, ಚರಿತ್ರೆ, ಪದನಿಷ್ಪತ್ತಿ ಮುಂತಾದವುಗಳ ಬಗ್ಗೆ ಚರ್ಚಿಸಿದ್ದೇನೆ. ನೆಲೆಗೊಂಡಿರುವ ಬಗೆಗಿನ ಕಥೆ ಬಹುಶಃ ೧೫ ಅಥವಾ ೧೬ನೇ ಶತಮಾನದ್ದೆಂದು ಊಹಿಸಿದರೆ ಮೂಲ ಕಾಲಭೈರವ ಚರಿತ್ರೆಯ ಕಥೆ ೧೦ ನೇ ಶತಮಾನದೆಂದು ಹೇಳುತ್ತದೆ. ಹಾಗೆಯೇ ಪದ ನಿಷ್ಪತ್ತಿಯ ಬಗ್ಗೆ ಚರ್ಚಿಸುವಾಗ ಹಲವು ಹೊಸ ಅಂಶಗಳು ಬೆಳಕಿಗೆ ಬರುತ್ತವೆ. 'ಮಂಕೆಮುಲಿ ಸಿದ್ದೇಶ್ವರ' ಎನ್ನುವ ಹೆಸರು ರಾಕ್ಷಸರರ ನಾಮಾಂಕಿತದಿಂದಲೇ ರೂಪವಾದದ್ದೆಂದು ತಿಳಿಯುತ್ತದೆ. ಹೀಗೆ ರಾಕ್ಷಸರು ಸಂಹಾರವಾದರೂ ರಾಕ್ಷಸರ ನಾಮಾವಳಿ ಉಳಿದಿರುವುದನ್ನು ನೋಡಿದರೆ ಪ್ರಸ್ತುತದಿನಗಳಲ್ಲಿಯೂ ಮನುಷ್ಯರೂಪದ ರಾಕ್ಷಸರು ಇದ್ದಾರೆ. ಇಂತಹ ರಾಕ್ಷಸರು ಒಂದು ರೀತಿಯಲ್ಲಿ ಪರಿಹಾರವಾದರೆ ಮತ್ತೊಂದು ರೀತಿಯಲ್ಲಿ ಉಳಿದುಕೊಳ್ಳುತ್ತಾರೆ ಎನ್ನುವ ಅಂಶವನ್ನು ಪ್ರತಿನಿಧಿಸುವಂತೆ ಕಾಣುತ್ತದೆ.

ಆಸ್ತಿ ಮತ್ತು ಆಡಳಿತವನ್ನು ನೋಡುವುದಾದರೆ ಆಡಳಿತ ನಾಥಪಂಥದ ಸ್ವಾಮೀಜಿಯವರ ಒಡೆತನದಲ್ಲಿದ್ದರೆ, ಅದರ ಆಸ್ತಿ ದೇವರ ಹೆಸರಿನಲ್ಲೇ ಬಿಡುವುದನ್ನು ಕಾಣಬಹುದು. ಇದರಿಂದಾಗಿ ಇಲ್ಲಿಯ ಆಸ್ತಿಯನ್ನು ಯಾರು ಮುಟ್ಟುಗೋಲು ಹಾಕುವಂತಿಲ್ಲ. ಇನ್ನು ಈಗ ಪೂಜಿಸುತ್ತಿರುವ ಲಿಂಗಾಯಿತ ಪೂಜಾರಿಗಳಿಗೆ ಮಠದ ಯಾವುದೇ ಅಧಿಕೃತವಾದ ಅಧಿಕಾರವಿಲ್ಲದ್ದು ಇದರಿಂದ ತಿಳಿಯುತ್ತದೆ. ಇದರಿಂದಾಗಿ ತಿಳಿಯುವುದೇನೆಂದರೆ 'ಸಿದ್ದೇಶ್ವರ' ಎನ್ನುವ ನಾಮಾಂಕಿತ ಇರುವುದರಿಂದಾಗಿ ಪಂಚಪೀಠಗಳಲ್ಲೊಂದಾದ ಉಜ್ಜೈನಿ ಪೀಠವು ಈ ಮಠವನ್ನು ಅನಧಿಕೃತವಾಗಿ ಲಿಂಗಾಯತ ಜನಾಂಗಕ್ಕೆ ಸೇರಿದ್ದೆಂದು ಲಿಂಗಾಯತರನ್ನು ಪೂಜೆಗೆ ನೇಮಿಸಿರುವ ಹುನ್ನಾರ ತಿಳಿಯುತ್ತದೆ. ಇದರಿಂದಾಗಿ ಮೂಲ ವಾರಸುದಾರರಾದ ವಾಲ್ಮೀಕಿ ಜನಾಂಗದವರು ಈ ವಾರಸುದಾರಿಕೆಯಿಂದ ವಂಚಿತರಾಗಿರುವುದನ್ನು ತಿಳಿಯಬಹುದು

ಮೂರನೇ ಅಧ್ಯಾಯದಲ್ಲಿ ''ಸುಂಕೇಮುಲೆ ಜೀವನದ ಚರಿತ್ರೆ ಮತ್ತು ನಾಥ ಪಂಥ'' ದಬಗ್ಗೆ ಚರ್ಚಿಸಿದ್ದೇನೆ. ಮೂಲತಃ ಈ ಕ್ಷೇತ್ರ ನಾಥ ಪಂಥಕ್ಕೆ ಸೇರಿದ್ದೇ ? ಎನ್ನುವ ಪ್ರಶ್ನೆಯನ್ನು ಹಾಕಿಕೊಂಡರೆ ಕೆಲವು ಅನುಮಾನಗಳಿವೆ. ಕಾಲಭೈರವ ರಾಕ್ಷಸರ ಸಂಹಾರಕ್ಕಾಗಿ ಜೋಗಿ ವೇಷವನ್ನು ಹಾಕುತ್ತಾನೆ. ಈ ಜೋಗಿಯೇ ಯೋಗಿ ಎನ್ನುವ ಹಿನ್ನೆಲೆಯಲ್ಲಿ ನಾಥಪಂಥದವರು ಈ ಮಠ ನಮ್ಮ ಸರಹದ್ದಿಗೆ ಸೇರಿದ್ದೆಂದು ವಶಪಡಿಸಿಕೊಂಡಿರಬೇಕೆಂದು ಊಹಿಸಬಹುದು. ಹೀಗಾಗಿ ನಾಥಪಂಥದ ಕದ್ರಿಯ ವ್ಯಾಪ್ತಿಗೆ ಪ್ರಸ್ತುತ ಮಠವು ಸೇರುತ್ತದೆ. ಹಾಗಾಗಿಯೇ ಕೆಲವು ಅನುಮಾನಗಳ ಮಧ್ಯೆಯೂ ನಾವು ಕಾಲಭೈರವನ ಈ ಕ್ಷೇತ್ರ ನಾಥಪಂಥಕ್ಕೆ ಸೇರಿದುದೆಂದು ವಿಶೇಷ ಭೈರವಾರಾಧನೆಯನ್ನು ಪ್ರಮುಖವಾಗಿ ಆಚರಿಸುವವರು 'ಭೈರರು'. ಆದರೆ ಇಲ್ಲಿ ಭೈರರು ಇಲ್ಲದೇ ಇರುವುದರಿಂದ ಭೈರವನನ್ನೇ 'ಸಿದ್ಧೇಶ್ವರ' ಎನ್ನುವ ಹೆಸರಿನಲ್ಲಿ ಲಿಂಗಾಯಿತರು ಮತ್ತು ಇತರ ಜಾತಿ ಸಮುದಾಯದವರು ಆರಾಧಿಸುವುದನ್ನು ಕಾಣಬಹುದು.

ನಾಲ್ಕನೇ ಅಧ್ಯಾಯದಲ್ಲಿ ಆಚರಣಾತ್ಮಕ ನೆಲೆಗಳ ಕುರಿತು ಚರ್ಚಿಸಿದ್ದೇನೆ. ಆಚರಣೆಗಳು ಸಮಾಜದ ನಿತ್ಯ ಪರಿವರ್ತನಾಶೀಲತೆಯ ಸಂಕೇತ. ಇಂತಹ ಆಚರಣೆಗಳು ಇಂದಿಗೂ ಜನರಲ್ಲಿ ಹೇಗೆ ಬೇರೂರಿದೆ ಮತ್ತು ಅವುಗಳು ಜನರನ್ನು ಹೇಗೆ ನಿಯಂತ್ರಿಸಿವೆ ಎನ್ನುವ ಬಗ್ಗೆ ವಿಶ್ಲೇಷಿಸಿದ್ದೇನೆ. ಆಧುನಿಕತೆಯೊಂದಿಗೆ ಮುಖಾಮುಖಿಯಾಗುತ್ತಿರವ ಈ ಹೊತ್ತಿನಲ್ಲಿಯೂ ಜನರು ದೇವರ ಮೇಲಿಟ್ಟಿರುವ ನಂಬಿಕೆಯನ್ನು ನೋಡಿದರೆ ಅಚ್ಚರಿಯೆನಿಸುತ್ತದೆ. ಇತ್ತ ಸಂಪೂರ್ಣವಾಗಿ ನಿರಾಕರಿಸಲೂ ಆಗದ, ಸಂಪೂರ್ಣ ಸ್ವೀಕರಿಸಲೂ ಆಗದ ನೆಲೆಯಲ್ಲಿ ಅಧ್ಯಯನ ನಿಲ್ಲಬೇಕಾಗುತ್ತದೆ. ಅಂತಹ ಒಂದು ಸಂದಿಗ್ಧತೆ ನನಗೂ ಅನುಭವವಾಯಿತು.

ಐದನೆಯ ಅಧ್ಯಾಯದಲ್ಲಿ ಭೈರವ ಮತ್ತು ಇತರ ದೈವಗಳ ಸಂಬಂಧಗಳ ಬಗ್ಗೆ ಚರ್ಚಿಸಿದ್ದೇನೆ. ಈ ಸಂಬಂಧಗಳು ಸಂಶೋಧನೆ ಕೆಲವು ಹೊಳಹುಗಳನ್ನು ಕೊಡುತ್ತವೆ. ೧೦ ನೇ ಶತಮಾನದ ಈ ಕಾಲದಲ್ಲಿ ಹರಳಯ್ಯನ ಚರಿತ್ರೆಯನ್ನು ನೋಡಿದರೆ ೧೨ ನೇ ಶತಮಾನದಲ್ಲಿ ಕಲ್ಯಾಣದಲ್ಲಿ ಇದ್ದು ಅರಳಯ್ಯ ೧೦ನೇ ಶತಮಾನದಲ್ಲಿ ಹೇಗೆ ಕಾಣಿಸಿಕೊಳ್ಳಲು ಸಾಧ್ಯ ಎನ್ನುವ ಪ್ರಶ್ನೆ ಕಾಡುತ್ತಿದೆ. ಹಾಗೆ ನೋಡಿದರೆ ಕಾಲ ಭೈರವನ ಚರಿತ್ರೆಯನ್ನು ೧೪-೧೫ನೇ ಶತಮಾನದಲ್ಲಿ ಕಟ್ಟಿರಬೇಕೆಂಬ ಅಂಶವನ್ನು ಮನಗಾಣಬಹುದು. ಹಾಗಾದರೂ ೧೨ ನೇ ಶತಮಾನದ ಹರಳಯ್ಯ ೧೪-೧೫ ನೇ ಶತಮಾನದಲ್ಲಿ ಬರಲು ಸಾಧ್ಯವೇ ? ಎನ್ನುವ ಪ್ರಶ್ನೆಯೊಂದು ಕಾಡುತ್ತದೆ. ಈ ಪ್ರಶ್ನೆಯನ್ನು ವಿಶ್ಲೇಷಿಸಿ ನೋಡುವುದಾದರೆ 'ಹರಳಯ್ಯ' ಎನ್ನುವವನು ವ್ಯಕ್ತಿಯಲ್ಲ ಒಂದು ' ಆಶಯ' ಅಥವಾ ಅಗೋಚರವಾದ ದೇವೀ ಸ್ವರೂಪ ಎನ್ನುವುದನ್ನು ತಿಳಿಯಬಹುದು.

'ಕಿಂಡಿ' ಎಂದ ತಕ್ಷಣ ಕರ್ನಾಟಕ ಚರಿತ್ರೆಯಲ್ಲಿ ನೆನೆಪಿಗೆ ಬರುವುದು ಒಂದು ಪ್ರಸಿದ್ದ ಚಿತ್ರದುರ್ಗದ ಒನಕೆ ಓಬವ್ವನ ಕಿಂಡಿ. ಮತ್ತು ಉಡುಪಿಯ ಕನಕನ ಕಿಂಡಿ. ಆದರೆ ಸುಂಕೇಮುಲೆಯಲ್ಲಿ ಅಷ್ಟೇ ಮಹತ್ವದ ಕರ್ಪೂರದಮ್ಮನ ಕಿಂಡಿಯೊಂದನ್ನು ಕಾಣಬಹುದು. ಇದು ಸಹ ಕರ್ಪೂರದಮ್ಮನ ವೀರವೇಷಕ್ಕೆ ಸಾಕ್ಷಿಯಾಗಿದೆ. ಕಾಲಭೈರವ ರಾಕ್ಷಸರೊಂದಿಗೆ ಸಂಹಾರಮಾಡುವಾಗ ಅವನ ನೆರವಿಗೆ ಕಾಟಯ್ಯ ಮತ್ತು ಬೋಸಯ್ಯರನ್ನು ಕರೆದುಕೊಂಡು ನಾಯಿಗಳೊಂದಿಗೆ ಕರ್ಪೂರಮ್ಮ ಬರುತ್ತಾಳೆ. ಆಗ ಈ ದುರ್ಗಮ ಬೆಟ್ಟವನ್ನು ಬೇಧಿಸಲು, ನುಸುಳಲು ಜಾಗವಿರುವುದಿಲ್ಲ ಆ ಕ್ಷಣದಲ್ಲಿ ಕರ್ಪೂರದಮ್ಮ ತನ್ನ ಒನಕೆಯಿಂದ ವೀರಾವೇಷದಿಂದ ಬೃಹತ್ತಾದ ಬಂಡೆಯನ್ನು ಹೊಡೆಯುತ್ತಾಳೆ. ಆಗ ಬಂಡೆ ಒಡೆದು ದಾರಿಯಾಗುತ್ತದೆ. ಆ ಮೂಲಕ ನುಸುಳಿ ಕಾಲ ಭೈರವನಿಗೆ ನೆರವಾಗುವ ಚರಿತ್ರೆ ಈ ಅಧ್ಯಯನದ ಮೂಲಕ ಬೆಳಕು ಪಡೆಯುತ್ತಿದೆ. ಈ ಮುಲಕ ಕರ್ನಾಟಕದ 'ಕಿಂಡಿ' ಕುರಿತಾದ ಚರಿತ್ರೆಯಲ್ಲಿ ಕರ್ಪೂರದಮ್ಮನ ಒನಕೆ ಕಿಂಡಿಯೂ ಸೇರುವುದು ಹೆಮ್ಮೆಯೆನಿಸುತ್ತದೆ.

ಆರನೇ ಅಧ್ಯಾಯದಲ್ಲಿ ' ಸುಂಕೇಮಲೆ ಭೈರವ ಮತ್ತು ವಿವಿಧ ಜನಸಮುದಾಯಗಳನ್ನು ಕುರಿತು ವಿಶ್ಲೇಷಿಸಿದ್ದೇನೆ. ಮೊಳಕಾಲ್ಮೂರು ಪರಿಸರ ಬಹುಸಂಸ್ಕೃತಿಯ ನೆಲೆವೀಡು ಎಂದು ಕರೆಯಬಹುದು. ಹಾಗೆ ನೋಡಿದರೆ ಇಲ್ಲಿ ಎಲ್ಲಾ ಜನಸಮುದಾಯದವರು ಅಂದರೆ ಹರಿಜನರು, ವಾಲ್ಮೀಕಿಗಳು, ಮಡಿವಾಳರು, ಲಿಂಗಾಯತರು, ಜಂಗಮದವರು ಹೀಗೆ ಸರ್ವ ಹನ್ನೊಂದು ಜಾತಿಯವರೂ ಸುಂಕಪ್ಪನಿಗೆ ನಡೆದುಕೊಳ್ಳುತ್ತಾರೆ. ಹೀಗಾಗಿ ಈ ಕ್ಷೇತ್ರ ಜಾತಿ ಸಾಮರಸ್ಯದ ಸಾಂಸ್ಕೃತಿಕ ಕೇಂದ್ರವಾಗಿವೆಯೆಂದು ಹೇಳಬಹುದು.

ಏಳನೆಯ ಅಧ್ಯಾಯದಲ್ಲಿ ಸುಂಕೇಮಲೆ ಭೈರವನ ಕುರಿತಾದ ಶಿಷ್ಟಸಾಹಿತ್ಯ ಮತ್ತು ಜನಪದ ಸಾಹಿತ್ಯವನ್ನು ಕುರಿತಾಗಿ ವಿಶ್ಲೇಷಣೆ ಮಾಡಿದ್ದೇನೆ. ಶಿಷ್ಟ ಸಾಹಿತ್ಯಕ್ಕಿಂತ ಜನಪದ ಸಾಹಿತ್ಯದಲ್ಲಿ ಮಹತ್ವದ ಹೊಳಹುಗಳು ದೊರೆಯುತ್ತವೆ. ಇವು ಚರಿತ್ರೆಗೆ ಪ್ರಮುಖ ಆಕರಗಳೂ ಆಗುತ್ತದೆ. ಹಾಗಾಗಿ ಈವರೆಗೂ ದಾಖಲಾಗದೇ ಇರುವ ಮೌಖಿಕ ಚರಿತ್ರೆಯನ್ನು ಮೊದಲಬಾರಿಗೆ ದಾಖಲಿಸಲು ಪರಯತ್ನಿಸಿದ್ದೇನೆ. ಮೌಖಿಕ ಸಾಹಿತ್ಯ ಕಟ್ಟಿಕೊಡುವ ಚರಿತ್ರೆ ಈವರೆಗೂ ನಂಬಿಕೊಂಡು ಬಂದಿದ್ದ ಕೆಲವು ಮೂಡತೆಗಳನ್ನು ಊಹಾಪೋಹಗಳನ್ನು ಒಡೆದು ಹಾಕುತ್ತದೆ. ಈ ನೆಲೆಯಲ್ಲಿ ನೋಡುವುದಾದರೆ ಮೌಖಿಕ ಚರಿತ್ರೆಯನ್ನು ವಾಸ್ತವಿಕತೆಯೊಂದಿಗೆ ಸಮ್ಮಿಲನಗೊಳಿಸುವ ಯತ್ನದಲ್ಲಿ ಇಲ್ಲಿ ವಿವರಣೆಯನ್ನು ಮಾಡಿದ್ದೇನೆ.

ಎಂಟನೇ ಅಧ್ಯಾಯದಲ್ಲಿ ''ಸುಂಕೇಮಲೆ ಭೈರವ ಮತ್ತು ಪ್ರಸ್ತುತ ಜಗತ್ತನ್ನು'' ಕುರಿತು ವಿಶ್ಲೇಷಣೆ ಮಾಡಿದ್ದೇನೆ. ಇಲ್ಲಿ ಆಧುನಿಕತೆಯ ತೀವ್ರ ಅಪ್ಪಿಕೊಳ್ಳುವಿಕೆಯಲ್ಲಿ ಆಚರಣೆಗಳು ಹೇಗೆ ತನ್ನ ಅಸ್ಮಿತೆಯನ್ನು ಕಾಪಾಡಿಕೊಂಡಿವೆ ಎನ್ನುವ ಬಗ್ಗೆ ಇತ್ತೀಚಿನ ನಂಬಿಕೆಗಳನ್ನು ಉದಾಹರಿಸಿದ್ದೇನೆ. ದೇವವೆಂದರೆ ಒಂದು ಭ್ರಮೆ ಎನ್ನುವ ವಾಸ್ತವದಲ್ಲಿಯೂ ಸುಂಕಪ್ಪನ ಬಗೆಗೆ ಇಟ್ಟಿರುವ ಅಪಾರ ಭಕ್ತಿ, ನಂಬಿಕೆಗಳನ್ನು ಅವುಗಳ ತೀವ್ರತೆಯನ್ನು ದಾಖಲಿಸಿದ್ದೇನೆ.

ಈ ಮೇಲಿನ ಎಲ್ಲಾ ಅಂಶಗಳು ನನ್ನ ಅಧ್ಯಯನದ ಫಲಿತಗಳು. ಇಲ್ಲಿ ಕೆಲ ಮೌಖಿಕ ಆಕರವನ್ನೇ ಬಳಸಿಕೊಳ್ಳುವ ಮೂಲಕ ಗತವನ್ನು ಕಟ್ಟಲು ಪ್ರಶ್ನಿಸಿದ್ದೇನೆ. ಈ ಅಧ್ಯಯನವೇ ಅಂತಿಮ ಎನ್ನು ನಿಲುವ ನನ್ನದಲ್ಲ. ನನ್ನ ಅಧ್ಯಾಯನ ವ್ಯಾಪ್ತಿಯಲ್ಲಿ ಎಷ್ಟನ್ನು ಚರ್ಚಿಸಬೇಕೋ ಅಷ್ಟನ್ನು ಪ್ರಮಾಣಿಕವಾಗಿ ಚರ್ಚಿಸಿದ್ದೇನೆ. ಈ ಚರ್ಚೆಯ ಮೂಲಕ ನನ್ನದೇ ಆದ ನಿಲುವುಗಳನ್ನು ಸಮರ್ಥಿಸಿಕೊಂಡಿದ್ದೇನೆ. ಅಂತಹ ಒಂದು ಸಮಕರ್ಥನೆ 'ಸುಂಕೇಮಲೆ ಭೈರವಾರಾಧನೆ - ಹೊಳಹು' ಅಧ್ಯಯನದ ಸಂಪ್ರಬಂಧವಾಗಿದೆ.

# ಆಧಾರ ಗ್ರಂಥಗಳು


೧. ಆಂಜನೇಯ . ಸಿ. (ಸಂ) - ೧೯೯೫ ಅಂತಃ ಕರಣದ ನಂಟು ಮದಕರಿ ಪ್ರಕಾಶನ ಚಿತ್ರದುರ್ಗ.

೨. ಆಂಜನೇಯ. ಸಿ. (ಸಂ) - ೧೯೯೫ ಪ್ರಮುಖ ಗಂಡುಗಲಿ ಮದಕರಿ ಪ್ರಕಾಶನ ಚಿತ್ರದುರ್ಗ.

೩. ಇಂದಿರಾ. ಆರ್. - ೧೯೮೮ ಮೂಢನಂಬಿಕೆಗಳು ಮನೋವಿಕಾಸ ಪುಸ್ತಕ ಮಾಲೆ ಫ್ಯಾಮಿಲಿ ಪ್ಲಾನಿಂಗ್ ಅಸೋಸಿಯೇಷನ್ ಆಫ್ ಇಂಡಿಯಾ - ಮೈಸೂರು.

೪. ಕೃಷ್ಣಮೂರ್ತಿ. ಮ.ಸು. - ೧೯೮೨ ಸಿದ್ದ ಸಾಹಿತ್ಯ ಪ್ರಸಾರಾಂಗ ಮಾನಸ ಗಂಗೋತ್ರಿ - ಮೈಸೂರು.

೫. ಗುಂಜೂರು ರಾಮಚಂದ್ರ ಶಾಸ್ತ್ರಿ - ೨೦೦೧ ಶಾಬರ ಮಂತ್ರಗಳು ಪೂಜಾ ಪುಸ್ತಕ ಬಂಡಾರ, ಬೆಂಗಳೂರು.

೬. ಚಂದ್ರಶೇಖರ್ ಕುಂಬಾರ್ (ಸಂ) - ೧೯೮೫ ಕನ್ನಡ ಜಾನಪದ ವಿಶ್ವಕೋಶ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೭. ಚನ್ನಣ್ಣ ವಾಲೀಕಾರ - ೧೯೯೮ ಹೈದ್ರಾಬಾದ್ ಕರ್ನಾಟಕ ಗ್ರಾಮದೇವತೆಗಲಲ ಜಾನಪದ ಅಧ್ಯಯನ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲ್ಬರ್ಗಾ.

೮. ಜೋಗಿ ಆನಂದ ನಾಥ - ೨೦೦೩ ನಾಥಪಂಥ ಕ್ಷೇತ್ರ ಜೋಗಿಮಠ ಕದರಿ - ಮಂಗಳೂರು, ಪ್ರಕಾಶಕರು - ನಾಥ ಸಂಪ್ರದಾಯ ಪ್ರಚಾರ ಸಮಿತಿ, ಕರ್ನಾಟಕ.

೯. ದಾಸೇಗೌಡ. ಜಿ.ವಿ. - ೧೯೭೩ ನಮ್ಮ ಜನಪದ ನಂಬಿಕೆಗಳು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. ವಿ.ವಿ. - ಮೈಸೂರು.

೧೦. ನರಸಿಂಹಮೂರ್ತಿ. ಹೆಚ್.ವಿ. - ೨೦೦೨ ನಮ್ಮ ಹಬ್ಬಗಳು ವಿಕಾಸನ ಪ್ರಕಾಶನ - ಉಡುಪಿ.

೧೧. ಪಾಂಡುರಂಗ.ಡಿ. ಆರ್. - ೧೯೯೦ ದಕ್ಷಿಣ ಕನ್ನಡ ಜಿಲ್ಲೆಯ ಭೈರವ ಪ್ರಕಾಶಕರು- ರಾಷ್ಟ್ರಕವಿ ಗೋವಿಂದ ಪೈ, ಉಡುಪಿ.

೧೨. ಮಹದೇವ ಶಂಕನಪುರ - ೨೦೦೨ ಮಂಟೇಸ್ವಾಮಿ ಮೂಮೆಂಟ್ ಚಿಕ್ಕಲ್ಲೂರು ಜಾತ್ರೆ ಪ್ರಕಾಶಕರು - ಪಿ. ಎಂ. ಎಸ್. ಆರ್. ಸಂಸ್ಥೆ ಕೊಳ್ಳೇಗಾಲ.

೧೩. ಮಂಜುನಾಥ ಬೇವಿನಕಟ್ಟಿ - ೧೯೯೯ ಜನಪದ ನಂಬಿಕೆಗಳು ಪ್ರಸಾರಂಗ : ಕನ್ನಡ ವಿಶ್ವ ವಿದ್ಯಾಲಯ ಹಂಪಿ ವಿದ್ಯಾರಣ್ಯ.

೧೪. ಮಂಗಳೂರು (ಕದ್ರಿ) - ೨೦೦೦ ಕಾಳಭೈರವೇಶ್ವರ ನಿತ್ಯ ಪೂಜಾ ಸ್ತೋತ್ರ ಕರ್ನಾಟಕ ನಾಥ ಪಂಥ ಪ್ರಚಾರ ಸಮಿತಿ - ಮೆಂಗಳೂರು.

೧೫. ರಂಗಪ್ಪ. ಎಂ. ಎಫ್.ಟಿ. ಎಸ್. - ೧೯೩೮ ಮೊಳಕಾಲ್ಮುರು ನುಂಕೆಮಲೆಯ ಸ್ವಸ್ವರೂಪದರ್ಪಣ ಪ್ರಸಿಡೆಂಟ್ ತತ್ವಜ್ಞಾನ ಮಂದಿರ - ಮೊಳಕಾಲ್ಮೂರು.

೧೬. ರಾ.ಗೌ - ೧೯೯೬ ಜನಪದ ಸಾಹಿತ್ಯ ರೂಪಗಳು ವಾಗ್ದೇವಿ ಪುಸ್ತಕಗಳು ಮೈಸೂರು.

೧೭. ರಾಜೇಂದ್ರ. ಡಿ.ಕೆ. - ೧೯೭೩ ನಮ್ಮ ಸುತ್ತಿನ ನಂಬಿಕೆಗಳು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿ.ವಿ. - ಮೈಸೂರು.

೧೮. ಲಕ್ಕಪ್ಪ ಗೌಡ. ಹೆಚ್.ಜೆ. (ಪ್ರ.ಸಂ) - ೧೯೯೭ ಜಾನಪದ ಕೈಪಿಡಿ ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೯. ಶ್ರೀಧರ್. ಹೆಚ್. ಜಿ. (ಸಂ) - ೨೦೦೩ ನವನಾಥ ಕಥಾ ಮತ್ತು ಚಪರಟ ನಾಥಶತಕ ಪ್ರಕಾಶನ : ಕಡವ ಶಂಬುಶರ್ಮ ಸ್ಮಾರಕ ಪ್ರತಿಷ್ಠಾನ - ಪುತ್ತೂರು.

೨೦. ಸಿದ್ದಲಿಂಗಯ್ಯ - ೧೯೯೭ ಗ್ರಾಮದೇವತೆಗಲು ಮೂಲಭಾರತಿ ಪ್ರಕಾಶನ ಬೆಂಗಳೂರು.

೨೧. ಪಂಪಾ ನಾಗರಾಜಯ್ಯ - ೧೯೮೫ ಕರ್ನಾಟಕ ಜಾತ್ರೆಗಳು ಕನ್ನಡ ಸಾಹಿತ್ಯ ಪರಿಷತ್ - ಬೆಂಗಳೂರು.

೨೨. ಹಿರೇಮಠ. ಎಸ್. ಎಸ್. - ೧೯೯೩ ಜಾತ್ರೆಗಳು ಸಮತಾ ಪ್ರಕಾಶನ ಹೊಸಪೇಟೆ.

# ''ವಕ್ತೃಗಳು''

| ಕ್ರ.ಸಂ | ಹೆಸರು | ವಯಸ್ಸು | ವಿದ್ಯಾಭ್ಯಾಸ | ವೃತ್ತಿ | ಜಾತಿ | ಸ್ಥಳ |
|---|---|---|---|---|---|---|
| ೧. | ಅಧಿಕಾರಿಗುರಣ್ಣ | ೪೪ | ೮ನೇತರಗತಿ | ಟೈಲರ್ | ವಾಲ್ಮೀಕಿ | ಕಾತ್ರಿಕೆಹಟ್ಟಿ |
| ೨. | ಅಂಗಡಿರತ್ನಮ್ಮ | ೫೦ | ಇಲ್ಲ | ಕೃಷಿ | ವೀರಶೈವ | ಕಾತ್ರಿಕೆಹಟ್ಟಿ |
| ೩. | ಅಜ್ಜಮುನಿ.ಡಿ.ಬಿ | ೬೦ | SSLC TCH | ಶಿಕ್ಷಕ | ವಾಲ್ಮೀಕಿ | ಎರ್ರಯ್ಯನಹಳ್ಳಿ |
| ೪. | ಓಬಕ್ಕ | ೪೮ | ಇಲ್ಲ | ಹೂವಿನ ವ್ಯಾಪಾರ | ವಾಲ್ಮೀಕಿ | ಮೊಳಕಾಲ್ಮುರು |
| ೫. | ಕುಮುತಿನಿಂಗಪ್ಪ | ೬೦ | ೨ನೇತರಗತಿ | ಕೃಷಿ | ವಾಲ್ಮೀಕಿ | ಕುಮುತಿ |
| ೬. | ಕೃಷ್ಣಪ್ಪ | ೪೪ | ೫ನೇತರಗತಿ | ಕೃಷಿ | ವಾಲ್ಮೀಕಿ | ಕಾತ್ರಿಕೆಹಟ್ಟಿ |
| ೭. | ಗೊಂ॥ಕಾವಲಯ್ಯ | ೫೮ | ೭ನೇತರಗತಿ | ಕೃಷಿ | ವಾಲ್ಮೀಕಿ | ರಾಮದುರ್ಗ |
| ೮. | ಗೌರಮ್ಮ | ೩೦ | ಇಲ್ಲ | ಕೃಷಿ | ವೀರಶೈವ | ಪೂಜಾರಹಟ್ಟಿ |
| ೯. | ಗೌರಮ್ಮ ಹೊಂಬಾಳೆ | ೬೫ | ಇಲ್ಲ | ಕೂಲಿ | ವೀರಶೈವ | ಕಾತ್ರಿಕೆಹಟ್ಟಿ |
| ೧೦ | ಗೌಡ್ರು ಬಸವರಾಜ | ೪೮ | ೮ನೇತರಗತಿ | ಕೃಷಿ | ವೀರಶೈವ | ಕಾತ್ರಿಕೆಹಟ್ಟಿ |
| ೧೧. | ಗುಬ್ಬಜ್ಜಿ ಗಿಡ್ಡಪ್ಪ | ೪೪ | ೩ನೇತರಗತಿ | ಸಿಮೆಂಟ್ ಕೆಲಸ | ವಾಲ್ಮೀಕಿ | ಕಾತ್ರಿಕಹಟ್ಟಿ |
| ೧೨. | ಗುಡ್ಡದ ಸಿದ್ದಣ್ಣ | ೪೪ | ೬ನೇತರಗತಿ | ಅರ್ಚಕ | ವೀರಶೈವ | ಪೂಜಾರಹಟ್ಟಿ |
| ೧೩. | ಚೆನ್ನಿಗ ಬೋರಯ್ಯ | ೫೯ | ಇಲ್ಲ | ವ್ಯಾಪಾರ | ವಾಲ್ಮೀಕಿ | ಕಾತ್ರಿಕೆಹಟ್ಟಿ |
| ೧೪. | ನಾಗರಾಜ ಹೆಚ್.ಡಿ | ೫೮ | BA.LLB | ವಕೀಲ | ಜೋಗಿಜನಾಂಗ | ಹಿರಿಯೂರು |
| ೧೫. | ನುಂಕೇಶ್ | ೩೦ | ೮ನೇತರಗತಿ | ವ್ಯಾಪಾರ | ವೀರಶೈವ | ಪೂಜಾರಹಟ್ಟಿ |
| ೧೬. | ಪೂಜಾರಿ ಬೊಮ್ಮಯ್ಯ | ೬೦ | ಇಲ್ಲ | ಕೃಷಿ | ವಾಲ್ಮೀಕಿ | ರಾಮದುರ್ಗ |
| ೧೭. | ಬೋರಯ್ಯ | ೪೬ | ಇಲ್ಲ | ಕೃಷಿ | ವಾಲ್ಮೀಕಿ | ಕಾತ್ರಿಕೆಹಟ್ಟಿ |
| ೧೮. | ಮಲ್ಲಯ್ಯ | ೫೨ | ೪ನೇತರಗತಿ | ದೊಡ್ಡಾಟದ ಶಿಕ್ಷಕ | ವಾಲ್ಮೀಕಿ | ಕುಮುತಿ |

| ಕ್ರ.ಸಂ | ಹೆಸರು | ವಯಸ್ಸು | ವಿದ್ಯಾಭ್ಯಾಸ | ವೃತ್ತಿ | ಜಾತಿ | ಸ್ಥಳ |
|---|---|---|---|---|---|---|
| ೧೯. | ಮಲ್ಲಮ್ಮ | ೫೨ | ಇಲ್ಲ | ಕೃಷಿ | ಗೊಲ್ಲರು | ಗೊಲ್ಲರಹಟ್ಟಿ |
| ೨೦. | ಮಾರಣ್ಣ | ೪೦ | ಇಲ್ಲ | ವ್ಯಾಪಾರ | ಹರಿಜನ | ಮೊಳಕಾಲ್ಮುರು |
| ೨೧. | ಮಲ್ಲಣ್ಣ ಪಿ.ವಿ | ೫೦ | ೮ನೇತರಗತಿ | ಕೃಷಿ | ವೀರಶೈವ | ಪೂಜಾರಹಟ್ಟಿ |
| ೨೨. | ಮಂಗಲನಾಥಾಜಿ | ೫೧ | ೧೦ನೇತರಗತಿ | ಕ್ಷೇತ್ರದಆಡಳಿತಾಧಿಕಾರಿ | ಬಾವಾಜಿಗಳು | ರಾಜಸ್ಥಾನ್ |
| ೨೩. | ರಾಮಯ್ಯ | ೫೮ | ಇಲ್ಲ | ಕಿನ್ನರಿಜೋಗಿ | ಗೋಸಾಯಿ | ದೇವರಹಟ್ಟಿ |
| ೨೪ | ರಾಮು | ೩೩ | ೮ನೇತರಗತಿ | ಕೂಲಿ | ವಾಲ್ಮೀಕಿ | ಮೊಳಕಾಲ್ಮುರು |
| ೨೫. | ರೇಡಿಪಾಲಯ್ಯ | ೪೮ | ಇಲ್ಲ | ಕೃಷಿ | ವಾಲ್ಮೀಕಿ | ಕಾತ್ರಿಕೆಹಟ್ಟಿ |
| ೨೬. | ವೆಂಕಟೇಶ | ೩೨ | TCH | ಶಿಕ್ಷಕ | ವೀರಶೈವ | ಪುಜಾರಹಟ್ಟಿ |
| ೨೭. | ಶಾಂತಮ್ಮ ಗುಂತಲ | ೫೦ | ಇಲ್ಲ | ಕೃಷಿ | ವೀರಶೈವ | ಪೂಜಾರಹಟ್ಟೊ |
| ೨೮. | ಸಿದ್ಧಪ್ಪ | ೬೦ | ಇಲ್ಲ | ಕಿನ್ನರಿಜೋಗಿ | ಗೋಸಾಯಿ | ದೇವರಹಳ್ಳಿ |
| ೨೯. | ಸಿದ್ದಮ್ಮ ಹೊಂಬಾಳೆ | ೫೮ | ಇಲ್ಲ | ಕೂಲಿ | ವೀರಶೈವ | ಪೂಜಾರಹಟ್ಟಿ |
| ೩೦. | ಸಿದ್ದಮ್ಮ | ೫೧ | ಇಲ್ಲ | ಕೃಷಿ | ವೀರಶೈವ | ಪೂಜಾರಹಟ್ಟಿ |



ನುಂಕೇಮಲೆ ಭೈರವನ ಮೂರ್ತಿ.



ಮಲ್ಲಿಕಾರ್ಜುನನ ಶ್ರೀಮೂರ್ತಿ.



ತಲೆ ಮಾತ್ರ ಕಾಣುವ ನುಂಕವ್ವನ ವಿಗ್ರಹ



ಸರಳ ರೇಖೋಪಾದಿಯಲ್ಲಿ ಕಾಣುವ ಕುದುರೆ ಹೆಜ್ಜೆಗಳು.



ಕರ್ಪೂರದಮ್ಮನ ವಿಗ್ರಹ.



ಜೋಗಿ ಅಥವಾ ಗೋರಕ್ಷನಾಥ.



ಭೈರವ ಬಯಲಾಟದ ಮತ್ತೊಂದು ದೃಷ್ಯ.





॥ ಲೋಂಕೇಮಲೆ ಶ್ರೀ ಸಿದ್ಧೇಶ್ವರ ಪ್ರಸನ್ನ ॥

# : ಸಮಸ್ತ ಜನರಿಗೆ ಸೂಚನಾ ಪತ್ರಿಕೆ. :

ಶ್ರೀಮತ್ ಆದಿ ಲೋಂಕೇಮಲೆಯ ಶ್ರೀ ಸಿದ್ಧೇಶ್ವರ ಸಂಸ್ಥಾನ ಪೀಠಾಧ್ಯಕ್ಷರ (110 ನೇ ಪಟ್ಟಾಧಿಕಾರಿಗಳಾದ **ಜ್ಞಾನನಾಥ ಬಾವಾಜಿ** ಯವರ) ಸಂಸ್ಥಾನದಿಂದ ಸಮಸ್ತ ಗ್ರಾಮಗಳಲ್ಲಿರುವ ಸರ್ವಭಕ್ತ ಮಹಾಶಯರಿಗೆ ಸೂಚಿಸುವದೇನಂದರೆ

**ಚಿತ್ರದುರ್ಗ ಜಿಲ್ಲೆ ನೊಳಕಾಲ್ಮುರು ತಾಲೂಕಿಗೆ ಸೇರಿದ ಕದರೀಮನಕ್ಕೊಳಪಟ್ಟ ಲೋಂಕೇಮಲೆ ಶ್ರೀ ಸಿದ್ಧೇಶ್ವರ ಸಂಸ್ಥಾನಕ್ಕೆ ಪೂರ್ವದಿಂದಲೂ ಭಕ್ತಿಯಿಂದ ನಡೆದುಕೊಂಡು ಕಾಣಿಕೆಯನ್ನ ಸಮರ್ಪಿಸಿ ಆಶೀರ್ವಾದಕ್ಕೆ ಭಾಗಿಗಳಾಗುವ ನಮ್ಮ ಜೋಗೀ ವರ್ಗದವರಿಗೆ ತಾವು ಯಾವ ತಕರಾರನ್ನು ಮಾಡದೆ ಶಕ್ತ್ಯಾನುಸಾರ ಸಹಾಯ ಸಹಾನುಭೂತಿಯನ್ನೀಯಬೇಕೆಂದು ಈ ಮೂಲಕ ಸೂಚಿಸುತ್ತೇವೆ.**

ಲೋಂಕೇಮಲೆಯ ಶ್ರೀ ಸಿದ್ಧೇಶ್ವರ ಸಂಸ್ಥಾನಾಧ್ಯಕ್ಷ,
**ಶ್ರೀ ಜ್ಞಾನನಾಥ ಬಾವಾಜಿ.**



ಶ್ರೀ ಜಗದೀಶ್ವರ ಪ್ರಿಂಟರ್ಸ್ ರಾಯದುರ್ಗ.

ॐ

# ನವನಾಥ ಝುಂಡ

ಅಥವಾ

# ನಾಥಪಂಥ ಯೋಗಿಗಳ ಪಾದಯಾತ್ರೆ

## ಸಮಾಜ ಬಂಧುಗಳಲ್ಲಿ ಹಾಗೂ ಭಕ್ತಾದಿಗಳಲ್ಲಿ ವಿಜ್ಞಾಪನೆ,

ಮಹನೀಯರೇ,

ಶ್ರೀ ಮನ್ನನವ ನಾರಾಯಣರ ಅವತಾರವೇ ನವನಾಥರು. ಶ್ರೀ ಮಚ್ಛೇಂದ್ರನಾಥ, ಶ್ರೀ ಗೋರಕ್ಷನಾಥರು ನವನಾಥರಲ್ಲಿಯೇ ಅತೀ ಪ್ರಭಾನ್ವಿತ ಪ್ರಮುಖರು ನಾಥಪಂಥ ಸಂಪ್ರದಾಯ ಇವರಿಂದಲೇ ಪ್ರಸಿದ್ಧಿಯಾಯಿತು. ಈ ನಾಥಪಂಥ ಅವಧೂತ ಯೋಗಿಗಳಾದ ಏಕನಾಥ ಜೋಗಿನಾಥ ಯೋಗಿಗಳಿಂದಲೇ ಶ್ರೀ ರೇಣುಕಾಂಬೆಯು ಕುಷ್ಠರೋಗದಿಂದ ಸದ್ಗತಿ ಪಡೆದಳು. ಶ್ರೀ ಗೋರಕ್ಷನಾಥರ ಶಿಷ್ಯತ್ವ ಪಡೆದ ಶ್ರೀ ಪರುಶುರಾಮುನಿಗೆ ಕ್ಷತ್ರಿಯ ಕುಲನಾಶದ ಪ್ರತೀಕ ತಗಲಿದ ಭಯಂಕರ ಶಾಪದಿಂದ ಮುಕ್ತನಾದನು. ಶ್ರೀ ಸಂತ ಜ್ಞಾನೇಶ್ವರನ ಅಣ್ಣ ನಿವೃತ್ತಿನಾಥನು ಶ್ರೀ ಗಹನೀನಾಥನಿಂದ ಉಪದೇಶ ಪಡೆದು ಪ್ರಭಾನ್ವಿತ ಸಂತ ಮಹಾಪುರುಷರಾದರು.

ನಾಥಪಂಥ ಸಂಪ್ರದಾಯವು ಪೌರಾಣಿಕ-ಐತಿಹಾಸಿಕಗಳಲ್ಲಿ ಹಾಸುಹೊಕ್ಕಾಗಿದೆ. ಆದ್ದರಿಂದಲೇ ಈ ಸಂಪ್ರದಾಯಕ್ಕೆ ಸನಾತನ ಧರ್ಮ ಎನ್ನುವರು. ಶ್ರೀ ಆದಿನಾಥನಿಂದ ನಟೇಶ್ವರ ಪಂಥ, ಶ್ರೀಪಾರ್ವತಿಯಿಂದ ಆಯಿಪಂಥ, ಶ್ರೀ ಬ್ರಹ್ಮನಿಂದ ಬ್ರಹ್ಮನಾಥ ಪಂಥ, ಶ್ರೀ ವಿಷ್ಣುವಿನಿಂದ ಮನ್ನಾಥ ಪಂಥ, ಶ್ರೀ ರಾಮನಿಂದ ರಾಮನಾಥ ಪಂಥ, ಶ್ರೀ ಭೀಷ್ಮಾಚಾರ್ಯನಿಂದ ಗಂಗನಾಥ ಪಂಥ, ಶ್ರೀ ಧರ್ಮರಾಯನಿಂದ ಧರ್ಮನಾಥ ಪಂಥ, ಶ್ರೀ ಮಾರುತಿಯಿಂದ ಧ್ವಜ ಪಂಥ, ಶ್ರೀ ತಿಗುಣ ಮೂರ್ತಿ ರಾವುಳೇಶ್ವರನಿಂದ ರಾವಳ ಪಂಥ, ಕಪೀಲ ಮುನಿಯಿಂದ ಕಪಿಲನಾಥ ಪಂಥ, ಶ್ರೀ ಕೃಷ್ಣನಿಂದ ಗೋಪಾಲ ಪಂಥ, ಪಾಗಲ ಪಂಥ, ಹನ್ನೆರಡು (ಬಾರಹ) ಪಂಥಗಳು ಸ್ಥಾಪನೆಯಾದಂದಿನಿಂದಲೇ ಭಾರತದ ಸುಪ್ರಸಿದ್ಧ ಪುಣ್ಯ ಕ್ಷೇತ್ರಗಳಾದ ಹರಿದ್ವಾರ, ಪ್ರಯಾಗ, ಉಜ್ಜಯಿನಿಗಳಲ್ಲಿ ಪ್ರತಿ ಮೂರು ವರ್ಷಗಳಿಗೊಮ್ಮೆ ಕುಂಭ ಮೇಳ ಮಹೋತ್ಸವ ಜರಗುತ್ತವೆ.

ಪ್ರತಿ ಹನ್ನೆರಡು ವರ್ಷಕ್ಕೊಮ್ಮೆ ತ್ರಯಂಭಕೇಶ್ವರದಲ್ಲಿ (ನಾಶಿಕ) ಮಹಾ ಕುಂಭ ಮೇಳ ಪ್ರಕ್ರಿಯೆಗಳನ್ನು ಮುಗಿಸಿಕೊಂಡು ಬಾರಹ ಪಂಥ ನಾಥಯೋಗಿಗಳು ಶ್ರೀ ಪಾತ್ರ ದೇವತೆ (ಅಮೃತ ಕಲಶ ಪ್ರತೀಕ) ಯೊಂದಿಗೆ ಹೊರಟು ಪಾದ ಯಾತ್ರೆ ಮಾಡುತ್ತಾ ಮಹಾರಾಷ್ಟ್ರ ರಾಜ್ಯದಿಂದ ಪ್ರಮುಖ ನಗರಗಳಲ್ಲಿರುವ ಮಠಗಳಿಗೆ ಮಠಾಧೀಶರನ್ನು ನೇಮಿಸುತ್ತ ಕರ್ನಾಟಕ ರಾಜ್ಯದ ನಿಪ್ಪಾಣಿ ನಗರ ಪ್ರವೇಶಿಸಿ,ಸಂಕೇಶ್ವರ, ಬೆಳಗಾವ, ಖಾನಾಪುರ, ಲೊಂಡಾ, ಮುಖಾಂತರ ಕುಂಬಾರಡಾ ಶ್ರೀ ಶಿದ್ಧ ಹಂಡಿಬಡಗನಾಥ ಮಠಕ್ಕೆ ಬಂದು ವಾಸ್ತವಿಸಿದ್ದಾರೆ. ಇಲ್ಲಿ 21 ದಿನಗಳವರೆಗೆ ಇದ್ದು ದಿನಾಂಕ 8-1-2004 ರಂದು ನಾಗರಗಾಳಿ, ಗೋದೊಳಿ, ಮಂಗಳವಾಡ, ಹಳಿಯಾಳ, ಕರ್ಲಘಟ್ಟಾ, ಸಾಮ್ರಾಣಿ, ಯಲ್ಲಾಪುರ, ಶಿರ್ಸಿ, ಚಂದ್ರಗುತ್ತಿ, ಹೀಗೆ ವಾಸ್ತವಿಸುತ್ತಾ ಮಂಗಳೂರು, ಕದ್ರಿ (ಕದಳಿ), ಶ್ರೀ ಯೋಗಿಶ್ವರ ಮಠಕ್ಕೆ ತಲುಪಿ ಮಹಾಶಿವರಾತ್ರಿಯಂದು ಶ್ರೀಶ್ರೀಶ್ರೀ 108 ಯೋಗಿ ಸಂಧ್ಯಾನಾಥಜಿ ಮಹಾರಾಜರನ್ನು ಕದ್ರಿ ಮಠಕ್ಕೆ ವಿಧಾನೂಕ್ತ ರಾಜರನ್ನಾಗಿ ಪಟ್ಟಾಭಿಷೇಕ ಮಾಡುತ್ತಾರೆ.

ಸಮಾಜ ಬಂಧು - ಭಕ್ತಾಧಿಗಳೆ ಈ ನವನಾಥ ಝುಂಢದಲ್ಲಿ 400ಕ್ಕೂ ಮಿಕ್ಕಿ ಮಹಾನ್ ತಪಸ್ವಿಗಳು, ಸಾಧನಾಪುರಷರು, ಹಠಯೋಗಿಗಳಾದ ಶ್ರೀ ಯೋಗಿ ಲಖಡಾಯಿನಾಥಜಿ ಯವರು 12 ವರ್ಷಗಳ ಪರಿಯಂತ ನಿಂತೆ ತಪಸ್ಸನ್ನಾಚರಿಸುತ್ತಿರುವ ಮಹಾತ್ಮರ ಹಾಗೂ ಶಿದ್ಧ ಹಂಡಿ ಬಡಗನಾಥ ಮಹಾರಾಜರ ಮತ್ತು ಎಲ್ಲ ಮಹಾನ್ ತಪಸ್ವಿ ನಾಥ ಯೋಗಿಗಳ ದರ್ಶನ ಪಡೆದು ಪುನಿತರಾಗಬೆಕೆಂದು ಬಿನ್ನಹ. ಪ್ರತಿನಿತ್ಯ ಪೂಜೆ-ಪ್ರಾರ್ಥನೆ ಯಜ್ಞ - ಯಾಗಾಧಿಗಳು ಲಕ್ಷಾಂತರ ರೂಪಾಯಿಗಳ ವೆಚ್ಚದಲ್ಲಿ ಅವ್ಯಾಹತವಾಗಿ ನಡೆಯುತ್ತಿರುವ ಈ ಮಹಾಕಾರ್ಯಗಳಿಗೆ ತಾವು ತನು-ಮನ-ಧನ ಸಹಾಯ ಸಲ್ಲಿಸಬೇಕೆಂದು ವಿನಂತಿ. ತಮ್ಮೆಲರಿಗೂ ಸಿದ್ಧ ಹಂಡಿಬಡಗನಾಥ ಮಹಾರಾಜ ಶ್ರೀ ಪಾತ್ರದೇವತಾ ಮತ್ತು ಮಹಾ ತಪೋನಿಧಿ ಯೋಗಿಶ್ವರರ ದರ್ಶನ ಪುಣ್ಯಾಶಿರ್ವಾದ ನೀಡಿ ಆಯುರಾರೋಗ್ಯಾಭಿವೃದ್ಧಿ ನಿಡಲೆಂದು ಪ್ರಾರ್ಥಿಸುವೆವು.

ತಮ್ಮ ವಿಶ್ವಾಸಿ

ಲಕ್ಷ್ಮಣಪ್ಪ ಪು. ಹಣಗಿ. ಅಧ್ಯಕ್ಷರು    ಸಿದ್ದಪ್ಪ ಪು. ಬಾವಲಿ ಕಾರ್ಯದರ್ಶಿ

ಹುಬ್ಬಳ್ಳಿ    ಅಖಿಲಭಾರತ ನಾಥಪಂಥ ರಾವಳ ಧರ್ಮ ಪ್ರಚಾರ ಸಮಿತಿ

ದಿ. 26-12-03    ಶ್ರೀ ಭೈರವನಾಥ ಮಂದಿರ ದಾಳಿಂಬರ ಪೇಟ, ಹಳೇ ಹುಬ್ಬಳ್ಳಿ. 24.

ಮುದ್ರಣಸೇವೆ :- ಶ್ರೀಮತಿ ಮಾತೂಶ್ರೀ ಗಂಗಮ್ಮ ಯ. ರಾವಳ ಇವರ ಸ್ಮರಣಾರ್ಥ ಶ್ರೀ ಕಲ್ಲಪ್ಪ ಯ. ರಾವಳ.

ಮಾರ್ಕಂಡೇಶ್ವರ ಪ್ರಿಂಟರ್ಸ್, ಜನ್ನಪೇಟ, ಹಳೇ ಹುಬ್ಬಳ್ಳಿ.

